# ಕೊಡಗು ಸಂಗಾತಿ

ನವೆಂಬರ್ 1 ರಿಂದ 30, 2001 **ಪಾಕ್ಷಿಕ ಪತ್ರಿಕೆ** (ಬೊಂತಲ್ 15-30 - ಜಾರ್ದೆ 1-14)

ನಂ. ೩೫, ಸವಿತಾ ನಿಲಯ, ೧ನೇ ಕ್ರಾಸ್, ೪ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - ೫೭೦ ೦೧೨

ಸಂಪಾದಕಿ : ಪಟ್ಟಡ ಶೀಲಾಮಣಿ Registered : 10-01-96 TCI Kar. 09592 ಕನ್ನಡ ಮತ್ತು ಅರೆಭಾಷೆಲಿ ಪ್ರಕಟಿತ

Reg. No. KA/SK/MYS-88 ಸಂಪುಟ : 5 ಸಂಚಿಕೆ : 21-22 ಪುಟಗಳು : 24 ಬೆಲೆ ರೂ. : 6-00




ಅಗರ್ಭ ಶ್ರೀಮಂತರಾಗಿ, ಸಮಾಜ ಸೇವಕರಾಗಿ, ಜನಾನುರಾಗಿಯಾಗಿ
ಬಡವರ ಬಂಧುಗಳಾಗಿ, ಜನಾಂಗದ ಕಣ್ಮಣಿ ಚಿರಪರಿಚಿತ ಕಾಲಕಂಡ
ಶ್ರೀ ತೋಟಂಬೈಲು ಮಾದಪ್ಪನವರು

ಲೇಖನ : ಒಳಪುಟದಲ್ಲಿ.



ಸೋನಾಲಿ
ಜನನ : 7-11-2000

## ಪ್ರಥಮ ವರ್ಷದ ಹುಟ್ಟು ಹಬ್ಬದ ಶುಭಾಶಯಗಳು

ಶ್ರೀ ಬಡುವಂಡ್ರ ಬೆಳ್ಯಪ್ಪ ಮತ್ತು ಕವಿತ ದಂಪತಿಗಳ ಪುತ್ರಿ ಸೋನಾಲಿ ತನ್ನ ಹುಟ್ಟು ಹಬ್ಬವನ್ನು ಆಚರಿಸಿಕೊಳ್ಳುವ ಸಂದರ್ಭ ಅವಳಿಗೆ ಕುಲದೈವ ಮತ್ತು ಶಾರದೆ ಉತ್ತಮ ಗುಣ, ವಿದ್ಯಾಬುದ್ಧಿ, ಆಯುರಾರೋಗ್ಯ ಐಶ್ವರ್ಯ ಕೊಟ್ಟು ಕಾಪಾಡಲಿ ಎಂದು ಹಾರೈಸುವ

ಅಣ್ಣ : ಬಡುವಂಡ್ರ ಯಶ್ವಿನ್ ಬೆಳ್ಯಪ್ಪ, ಮರಗೋಡು
ಅಜ್ಜ, ಅಜ್ಜಿ : ಶ್ರೀಮತಿ ಮತ್ತು ಶ್ರೀ ಬಡುವಂಡ್ರ ಈರಪ್ಪ, ಮರಗೋಡು
ಶ್ರೀಮತಿ ಮತ್ತು ಶ್ರೀ ಪೊನ್ನಚ್ಚನ ಸೋಮಯ್ಯ, ಗೋಣಿಕೊಪ್ಪಲು
ದೊಡ್ಡಪ್ಪ, ದೊಡ್ಡಮ್ಮ : ಶ್ರೀಮತಿ ಮತ್ತು ಶ್ರೀ ಬಡುವಂಡ್ರ ಸಿದ್ಧಾರ್ಥ, ತಮ್ಮಯ್ಯ, ಮರಗೋಡು
ಶ್ರೀಮತಿ ಮತ್ತು ಶ್ರೀ ಕೋಚನ ಜನಾರ್ಧನ, ಗಾಳಿಬೀಡು
ಮಾವ, ಅತ್ತೆ : ಶ್ರೀಮತಿ ಮತ್ತು ಶ್ರೀ ಬೈಮನ ವಿಶ್ವನಾಥ, ತೋರ, ವಿರಾಜಪೇಟೆ
ಶ್ರೀಮತಿ ಮತ್ತು ಶ್ರೀ ಲೋಕೇಶ್, ಹೆರೂರು, ಸುಂಟಿಕೊಪ್ಪ
ಮಾವಂದಿರು : ಪೊನ್ನಚ್ಚನ ಲೋಕೇಶ್, ಸದಾನಂದ, ಗೋಣಿಕೊಪ್ಪಲು
ಚಿಕ್ಕಮ್ಮ : ಪೊನ್ನಚ್ಚನ ಅಶ್ವಿನಿ, ಝಾನ್ಸಿ, ಗೋಣಿಕೊಪ್ಪಲು.

## ವಧು ಬೇಕಾಗಿದೆ

ಉತ್ತಮ ಅಭಿರುಚಿಯುಳ್ಳ 5' 11" ಎತ್ತರದ 28 ವರ್ಷದ ಗೋಧಿ ವರ್ಣದ, ಬಿ.ಕಾಂ., ಎಂ.ಸಿ.ಎ. ಪದವೀಧರ, ಬೆಂಗಳೂರಿನಲ್ಲಿ ಅಂತರಾಷ್ಟ್ರೀಯ ಕಂಪನಿಯಲ್ಲಿ ಸಾಫ್ಟ್‌ವೇರ್ ಇಂಜೀನಿಯರ್ ಉದ್ಯೋಗಸ್ಥ ವರನಿಗೆ, ಗೌರವಸ್ಥ ಕುಟುಂಬದ ಉದ್ಯೋಗಸ್ಥೆ ವಧು ಬೇಕಾಗಿದ್ದಾಳೆ. ಜಾತಕದೊಂದಿಗೆ ಕೆಳಗಿನ ವಿಳಾಸದಾರರನ್ನು ಸಂಪರ್ಕಿಸಬೇಕಾಗಿ ವಿನಂತಿ.

**ಬಾಕ್ಸ್ ನಂ. 12,** C/o ಕೊಡಗು ಸಂಗಾತಿ, ಮೈಸೂರು ☎ : 0821 - 516771

## ಮೈಸೂರಿನಲ್ಲಿ ಹುತ್ರಿ ಪ್ರಯುಕ್ತ ಕದಿರು ಮತ್ತು ನೆರೆ ವಿತರಣೆ

ಕೊಡಗಿನ ನಾಡ ಹಬ್ಬವಾದ ಹುತ್ತೇರಿ ಹಬ್ಬವನ್ನು ಡಿಸೆಂಬರ್ 1 ರ ರಾತ್ರಿ 9-00 ಗಂಟೆಗೆ ನೆರೆ ಕಟ್ಟುವ ಮತ್ತು ಕದಿರು ತೆಗೆಯುವ ಕಾರ್ಯಕ್ರಮವನ್ನು ಮೈಸೂರಿನ ಗೌಡ ವಿದ್ಯಾರ್ಥಿ ನಿಲಯದಲ್ಲಿ ಹಮ್ಮಿಕೊಳ್ಳಲಾಗಿದೆ. ಆದ್ದರಿಂದ ಜನಾಂಗ ಬಾಂಧವರು ಹೆಚ್ಚಿನ ಸಂಖ್ಯೆಯಲ್ಲಿ ಸೇರಿ ಜಯಪ್ರದವಾಗಿ ನಡೆಯಿಸಿ ಕೊಡುವಂತೆ ಕೋರಲಾಗಿದೆ.

**- ಅಧ್ಯಕ್ಷರು, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಒಕ್ಕೂಟ, ಮೈಸೂರು**

## "ಪುಣ್ಯ" ವಧು / ವರರ ಅನ್ವೇಷಣೆ ಕೇಂದ್ರ - ಸುಂಟಿಕೊಪ್ಪ

ಆತ್ಮೀಯರೇ, ನಿಮ್ಮಲ್ಲಿ ಯಾರಾದರು ವಧು ವರರ ಅನ್ವೇಷಣೆಯಲ್ಲಿದ್ದರೆ ಯಾವುದೇ ಸಂಕೋಚವಿಲ್ಲದೆ ಅವರ ಇತ್ತೀಚೆಗಿನ ಭಾವಚಿತ್ರದೊಂದಿಗೆ ಕೂಡಲೇ ಸಂಪರ್ಕಿಸಿ. ಈಗಾಗಲೇ ಅನೇಕ ಬಾಂಧವರು ಇದರ ಸದುಪಯೋಗವನ್ನು ಪಡೆದಿರುವರು. ಅದರಲ್ಲಿ ನೀವು ಸಹ ಒಬ್ಬರಾಗಿರಿ. ಇಂದೇ ಸಂಪರ್ಕಿಸಿ

**ಶ್ರೀಮತಿ ರತಿ / ಅರುಣಕುಮಾರ್, ಪುಣ್ಯ ವಧುವರರ ಅನ್ವೇಷಣೆ ಕೇಂದ್ರ ಮತ್ತುರಿಯಲ್ ಎಸ್ಟೇಟ್,**
ಎನ್.ಸಿ.ಜಿ. ಕಾಂಪ್ಲೆಕ್ಸ್, ಅಯ್ಯಪ್ಪ ದೇವಸ್ಥಾನ ಹತ್ತಿರ, ಮೈಸೂರು ರಸ್ತೆ, ಸುಂಟಿಕೊಪ್ಪ - 571237
☎ : 08276 -62252

## ಹುತ್ತೇರಿ ಪ್ರಯುಕ್ತ ಪಟಾಕಿ ವಿತರಣೆ

**ಹುತ್ತೇರಿ ಪ್ರಯುಕ್ತ ಮೈಸೂರಿನಲ್ಲಿ ಶಿವಕಾಶಿಯ ದರದಲ್ಲಿ ಪಟಾಕಿ ಲಭ್ಯವಿದೆ.**
**ಆಸಕ್ತರು ಈ ಕೆಲಕಂಡವರನ್ನು ಸಂಪರ್ಕಿಸಿ.**

ತಡಿಯಪ್ಪನ ಕುಮಾರಜಯ ☎ : 473802, ಕುಯ್ಯಮುಡಿ ರಾಮಪ್ಪ ☎ : 517658, ಕರ್ಣಯ್ಯನ ಲಕ್ಷಣ ☎ : 489052, ಪಟ್ಟಡ ಪ್ರಭಾಕರ ☎ : 516771, ಪೋರೆಯನ ಆನಂದ, ಮ್ಯಾನೇಜರ್ ☎ : 415983

ಪ್ರಕಟಣೆ : **ಕೊಡಗು ಗೌಡ ಮಾಜಿ ಸೈನಿಕರ ಸಂಘ (ರಿ.), ಮೈಸೂರು**



# 2001, ನವೆಂಬರ್ 1 ರಿಂದ 30ರ ತನಕ






| | |
|---|---|
|  ಚಂದಾ ಕಳುಹಿಸುವ ಮತ್ತು ಜಾಹೀರಾತು ಪ್ರಸಾರ ಕಛೇರಿ | **ಕೊಡಗು ಸಂಗಾತಿ,** 35,"ಸವಿತಾ ನಿಲಯ", 1ನೇ ಕ್ರಾಸ್, 4ನೇ ಬ್ಲಾಕ್, ಜಯಲಕ್ಷ್ಮಿಪುರಂ, ಮೈಸೂರು - 12. **ಫೋನ್ : 0821/516771** |
|  ಮಡಿಕೇರಿಯಲ್ಲಿ ಸಂಗಾತಿ ಕಛೇರಿ ಚಿಪ್ಪೆ, ಹಸೆಮಣೆ / ಶುಭಾಶಯ ಕಾರ್ಡ್ಸ್ / ಕ್ಯಾಸೆಟ್ ಕೀ ಚೈನ್ ಲಭ್ಯ | ಬೈತಡ್ಕ ಜಾನಕಿ ಬೆಳ್ಯಪ್ಪ,, ನಂ. 21-16 ಎಲ್. ಐ. ಸಿ. ಹತ್ತಿರ, ರೇಸ್ ಕೋರ್ಸ್ ರಸ್ತೆ, ಮಡಿಕೇರಿ, **ಫೋನ್ : 08272/28047** |
| | ಚೆರಿಯಮನೆ ರಮೇಶ್, C/o ಪಾಂಡ್ಯನ್ ಕ್ಯಾಸೆಟ್ ಅಂಗಡಿ, ಖಾಸಗಿ ಬಸ್ ನಿಲ್ದಾಣ, ಮಡಿಕೇರಿ, ಫೋನ್ : 08272/29620 |
|  ವಿರಾಜಪೇಟೆ | ಬಾರಿಕೆರ ಮನೋಜ್‌ಕುಮಾರ್, ಇಗ್ಗುತ್ತಪ್ಪ ಕೋಲ್ಡ್ ಸ್ಟೋರ್, ಖಾಸಗಿ ಬಸ್ ನಿಲ್ದಾಣ, ವೀರಾಜಪೇಟೆ ಫೋನ್ : 08274/56591 |
|  ಕುಶಾಲ ನಗರ | ಕುಂಭಗೌಡನ ಸೋಮಣ್ಣ, ಮಯೂರ ಕೋಲ್ಡ್ ಸ್ಟೋರೇಜ್, ಮುಖ್ಯ ರಸ್ತೆ, ಕುಶಾಲನಗರ - 571 234 ಫೋನ್ : 08276/73370 |
|  ಬೆಂಗಳೂರು ಮಹಾನಗರ | ಕಲ್ಲುಮುಟ್ಲು ಬಸಪ್ಪ, ನಂ. 37, 3ನೇ ಮೇನ್, ನಂಜಪ್ಪ ಬ್ಲಾಕ್, ಕೆಂಪೇಗೌಡ ನಗರ, ಬೆಂಗಳೂರು -19, ಫೋನ್ : 080/6500946 |

**ಚಂದಾ ವಿವರ : ಜೀವಾವಧಿ ಸದಸ್ಯತನ - 2000 ರೂ., ಬಿಡಿ ಪ್ರತಿ - 6 ರೂ.**

ವಾರ್ಷಿಕ ಚಂದಾ - 150 ರೂ. (ಅಂಚೆ ವೆಚ್ಚ ಸೇರಿ), ಒಲೆಗೊಂದರಂತೆ ಸದಸ್ಯರಾಗಿ ಕೊಂಡು ಓದಿ.

# ಸಂಪಾದಕೀಯ : ಉಗ್ರಗಾಮಿಗಳು

ಉಗ್ರಗಾಮಿಗಳು ಹಲವಾರು ರೀತಿಯಲ್ಲಿವೆ. ಇವುಗಳಲ್ಲಿ ಮತಾಂಧಕರ ಉಗ್ರಗಾಮಿಗಳು, ಭಾಷಾಂಧಕಾರ ಉಗ್ರಗಾಮಿಗಳು ಒಂದು ವಿಧವಾದವು. ಶ್ರೀಲಂಕಾದ ಎಲ್.ಟಿ.ಟಿ.ಇ. ಉಗ್ರಗಾಮಿಗಳು ತಮಿಳು ಭಾಷಾಂಧಕರಾದರೆ ಅಫಘಾನಿಸ್ಥಾನದ ತಾಲಿಬಾನ್ ಉಗ್ರಗಾಮಿಗಳು ಮತಾಂಧ ಉಗ್ರಗಾಮಿಗಳು.

ಈ ಉಗ್ರಗಾಮಿಗಳು ಸಮಾಜಘಾತಕ ಕೃತ್ಯಗಳನ್ನು ಎಸಗಿದ್ದಾರೆ. ಇವುಗಳು ಸಾಧಾರಣ 20-30 ವರ್ಷಗಳಿಂದೀಚೆ ಹೆಚ್ಚು ಹೆಚ್ಚಾಗಿ ಪ್ರಪಂಚದ ಎಲ್ಲಡೆಗಳಲ್ಲಿ ಕಾಣಿಸಿಕೊಳ್ಳುತ್ತಿವೆ.

ಪಾಕಿಸ್ಥಾನದ ಉಗ್ರಗಾಮಿಗಳು ಕಾಶ್ಮೀರವನ್ನು ಭಾರತದಿಂದ ಬೇರ್ಪಡಿಸುವುದಕ್ಕೆ ಉಗ್ರಗಾಮಿಗಳ ಮುಖಾಂತರ ಪ್ರಯತ್ನ ಪಡುತ್ತಿವೆ. ಶ್ರೀಲಂಕಾದ ಎಲ್.ಟಿ.ಟಿ.ಇ.ಯು ತಮಿಳರು ಹೆಚ್ಚು ವಾಸವಾಗಿರುವ ಪ್ರದೇಶವನ್ನುತಮಿಳರಿಗಾಗಿ ಸ್ವತಂತ್ರ ರಾಜ್ಯವಾಗಿ ನಿರ್ಮಿಸುವುದಕ್ಕಾಗಿ ಹೋರಾಡುತ್ತಿದ್ದಾರೆ. ಆದ್ದರಿಂದ ಅವರ ಉಪಟಳ ಭಾರತಕ್ಕೊ ಸಹ ತಲುಪಿದಂತಾಗಿದೆ.

ಸಾಮಾನ್ಯ ಜನರಿಗೆ ಒಂದು ರಾಷ್ಟ್ರದ ಸೇನೆಯನ್ನು ಎದುರಿಸುವ ಶಕ್ತಿಯನ್ನು ಹೊಂದಲು ಅವರು ಪಡೆದಿರುವ ತರಬೇತಿ ಅವರು ಬಳಸುವ ಯುದ್ಧ ಸಾಮಗ್ರಿಗಳು ಬೇರೆ ರಾಷ್ಟ್ರದವರ ಸಹಾಯ ಇಲ್ಲದೇ ಮಾಡುವುದಕ್ಕೆ ಸಾಧ್ಯವೇ ಇಲ್ಲ. ಒಂದು ದೇಶವನ್ನು ಹಾಳು ಮಾಡುವ ಯೋಚನೆ ಇನ್ನೊಂದು ರಾಷ್ಟ್ರಕ್ಕೆ ಇದ್ದರೆ ಇಂತಹ ಉಗ್ರಗಾಮಿಗಳಿಗೆ ಪ್ರೋತ್ಸಾಹ ತರಬೇತಿ ಆಯುಧಗಳ ಸರಬರಾಜು ಇಲ್ಲದಿದದರೆ ಈ ರೀತಿಯ ಉಗ್ರವಾದಿಗಳ ಬೆಳವಣಿಗೆ ಸಾಧ್ಯವಿಲ್ಲ. ಈ ದುಷ್ಟಶಕ್ತಿಗಳು ಎತ್ತರಕ್ಕೆ ಬೆಳೆದ ನಂತರ ಅವುಗಳ ಹತೋಟಿ ಅಷ್ಟೊಂದು ಸುಲಭವಲ್ಲ. ಆದ್ದರಿಂದ ವಿಶ್ವದ ಎಲ್ಲಾ ರಾಷ್ಟ್ರಗಳು ಹಾಗೂ ಜನತೆ ಈ ರೀತಿ ಬೆಳೆಯುತ್ತಿರುವ ದೈತ್ಯಾಕಾರದ ಉಗ್ರಗಾಮಿಗಳ ಬೆಳವಣಿಗೆ ಈ ಉಗ್ರಗಾಮಿಗಳು ಅಪಾಯಕಾರಿ ಶಸ್ತ್ರಗಳನ್ನು ಬಳಸುವ ತಂತ್ರಜ್ಞಾನ ಹೊಂದಿರುತ್ತಿರಲಿಲ್ಲ. ವಿಜ್ಞಾನ ಹಾಗೂ ದೇಶ ರಕ್ಷಣ ಆಯಾಯ ರಾಷ್ಟ್ರಗಳ ವಿಜ್ಞಾನಕ್ಕು ಅಭಿವೃದ್ಧಿ ಹಾಗೂ ದೇಶದ ಸಂರಕ್ಷಣೆಯ ಹೊಣೆಗಾರಿಕೆಯನ್ನು ಜವಾಬ್ದಾರಿಯಿಂದ ನಿರ್ವಹಿಸದಿದ್ದರೆ ಈ ರೀತಿಯ ಗಂಡಾಂತರಗಳಿಗೆ ದಾರಿ ಮಾಡಿ ಕೊಡುತ್ತಿರಲಿಲ್ಲ.

ಆದ್ದರಿಂದ ಇನ್ನು ಮುಂದಾದರೂ ಪ್ರತೀ ರಾಷ್ಟ್ರಗಳು ಯಾವುದೇ ಮತ, ಭಾಷೆ ರಾಜಕಾರಣದ ವ್ಯತ್ಯಾಸವನ್ನು ಗುರ್ತಿಸದೆ ಉಗ್ರಗಾಮಿಗಳನ್ನು ಹತ್ತಿಕ್ಕುವ ಏಕೈಕ ಗುರಿಯಿಂದ ಕಾರ್ಯವೆಸಗಿದರೆ ಮಾತ್ರ ಈ ಪ್ರಪಂಚದಲ್ಲಿ ಶಾಂತಿ ಸ್ಥಾಪನೆಗೆ ಸಾಧ್ಯವಾದೀತೇ ಹೊರತು ಮತ, ಭಾಷೆ, ಬಣ್ಣ (Colour) ರಾಜಕಾರಣಗಳ ಭೇದಭಾವ ಬಿಟ್ಟು ಪ್ರಯತ್ನಿಸಿದರೆ ಮಾತ್ರ ಉಗ್ರಗಾಮಿಗಳ ಹುಟ್ಟಡಗಿಸುವುದಕ್ಕೆ ಸಾಧ್ಯವಾದೀತು.

ಶ್ರೀ ಸ್ವಾಮಿವಿವೇಕಾನಂದರು ಹೇಳಿದಂತೆ ಮಾನವನು ಹಕ್ಕಿಯಂತೆ ಹಾರಲು ಕಲಿತರೂ ಮೀನಿನಂತೆ ನೀರಿನಲ್ಲಿ ಹೋಗಲೂ ಕಲಿತರೂ ಮನುಷ್ಯ ಇನ್ನೊಬ್ಬ ಮನುಷ್ಯನನ್ನು ಅರಿತುಕೊಳ್ಳದಿದ್ದರೆ ನಾಗರೀಕತೆ ವಿಜ್ಞಾನ ಎಷ್ಟೇ ಬೆಳೆದರೂ ಅವೆಲ್ಲ ವ್ಯರ್ಥವಾದ ಮಾನವನ ಶಾಂತಿಭಂಗಕ್ಕೆ ಕಾರಣವಾದೀತೆಂದು ಸಂಗಾತಿಯ ಅಭಿಪ್ರಾಯ.

---

## ಪ್ರಕಟಣೆ : ಪ್ರಿಯ ಚಂದದಾರರ ಗಮನಕ್ಕೆ

ಕೊಡಗು ಸಂಗಾತಿ ಪಾಕ್ಷಿಕ ನಿರಂತರವಾಗಿ ತಿಂಗಳಿಗೆ ಸರಿಯಾಗಿ 2 ಪತ್ರಿಕೆಯನ್ನು ತರುತ್ತಿದ್ದೆವು. ಈ ಮಧ್ಯೆ ಅನಿವಾರ್ಯವಾಗಿ 1-6-2001ರಿಂದ 31-12-2001ದ ತನಕ ತಿಂಗಳಿಗೆ ಒಂದರಂತೆ ಮಾತ್ರ ನೀಡಲು ಶಕ್ತರಾಗಿರುವೆವು ಎಂಬುದಕ್ಕೆ ವಿಷಾದಿಸುತ್ತೇವೆ. ಕಾರಣ ಕೊಡಗು ಮತ್ತು ಇತರ ಕಡೆಗಳಿಂದ 70%ಕ್ಕಿಂತಲೂ ಹೆಚ್ಚಿನ ನಮ್ಮ ಚಂದದಾರರು ಸುಮಾರು 6 ತಿಂಗಳು, 1 ವರ್ಷ, 2 ವರ್ಷಕ್ಕಿಂತಲೂ ಬಾಕಿಯನ್ನಿರಿಸಿಕೊಂಡಿದ್ದಾರೆ. 3, 4 ಬಾರಿ ಜ್ಞಾಪನ ಪತ್ರ ಕಳುಹಿಸಿದರು ಸ್ಪಂದನವಿರುವುದಿಲ್ಲ.

ಆದ್ದರಿಂದ 30-9-2001ರತನಕ ನವೀಕರಿಸದೆ ಇರುವ ಚಂದದಾರರಿಗೆ ಪತ್ರಿಕೆಯನ್ನು 1-1-2002ರಿಂದ ನಿಲ್ಲಿಸಲಾಗುವುದು. ನಂತರ ಪತ್ರಿಕೆಯ ಬೆಲೆಯನ್ನು ನಿಗದಿಪಡಿಸಿ, ಪತ್ರಿಕೆ ತಿಂಗಳಿಗೆ ಒಂದೆ ಯಾ ಎರಡೆ ಎಂಬುದನ್ನು ತೀರ್ಮಾನಿಸಲಾಗುವುದು. ಈತನ್ಮಧ್ಯೆ ಪತ್ರಿಕೆ ನಡೆಯಿಸುವ ಪ್ರತಿಭಾವಂತ ಆಸಕ್ತರಿದ್ದರೆ ಸಂಗಾತಿಯನ್ನು ಸಂಪರ್ಕಿಸುವುದು. ಅರೆಭಾಷೆ ಮಾತನಾಡುವ ಅಥವಾ ಸಾರ್ವಜನಿಕರಿಗೂ ಅನ್ವಯವಾಗುವುದು. ಸಂಗಾತಿ ಜೀವಂತ ಉಳಿಯಬೇಕು.

ಅರೆಗನ್ನಡ ಭಾಷೆ (ಅರೆಭಾಷೆ) ಗೌಡ ಸಾಹಿತ್ಯ ಅಕಾಡೆಮಿ ರಚಿಸುವ ಈ ಸಂದರ್ಭದಲ್ಲಿ ಪತ್ರಿಕೆಗೆ ಹಿಂದೇಟು ಆಗಬಾರದು. ಈ ನಿಟ್ಟಿನಲ್ಲಿ ಚಂದದಾರ / ಹಿತೈಷಿಗಳ ಸರ್ವ ಸಹಕಾರ ಅಗತ್ಯ ಬೇಕಿದೆ. ಸಂಗಾತಿ ಮಗು ನಿಮ್ಮದು. ಅದರ ಲಾಲನೆ ಪೋಷಣೆ ನಿಮ್ಮ ಕೈಯಲ್ಲಿದೆ. ನಿಮ್ಮ ತಾಳ್ಮೆ, ಸಹನೆ, ಸಹಕಾರಕ್ಕೆ ಸಂಗಾತಿ ಯಾವತ್ತು ಚಿರ ಋಣಿ. ನಗದು/ಡಿ. ಡಿ./ಎಂ. ಓ./ಚೆಕ್ ಮೂಲಕ ಕಳುಹಿಸಿ ಸಹಕರಿಸುವುದು. ಬಾಕಿ ಇರುವ ಚಂದದಾರರ ಹೆಸರನ್ನು ಪತ್ರಿಕೆಯಲ್ಲಿ ಪ್ರಕಟಿಸಲು ಬಹಳ ಒತ್ತಡವಿದೆ. ದಯವಿಟ್ಟು ಮಾನ್ಯ ಬಾಕಿ ಚಂದದಾರರು ಕೂಡಲೇ ನವೀಕರಿಸಿಕೊಳ್ಳುವುದು. ವಂದನೆಗಳು

ಪಟ್ಟಡ ಪ್ರಭಾಕರ,
ಗೌರವ ಸಂಪದಾಕ

ಪಟ್ಟಡ ಶೀಲಾಮಣಿ, ಸಂಪಾದಕಿ
ಮತ್ತು ಬಳಗ ☎ : 0821 - 516771

---

# ನಿರಂತರ ಸೇವೆಯಿಂದ ಜನಮನದಲ್ಲಿ ಅಮರರಾಗುಳಿದ ಸಮಾಜಸೇವಕರು ಶ್ರೀ ತೋಟಂಬೈಲು ಮಾದಪ್ಪನವರು.

ಬರಹ : ಪಟ್ಟಡ ಶಿವಕುಮಾರ್, ಉಪನ್ಯಾಸಕ

'ಮಾನವ ಜನುಮ ಬಹುದೊಡ್ಡದು, ಅದನ್ನು ಹಾಳುಗೆಡಹ ಬೇಡಿರೋ' ಎಂಬುದು ವಿವೇಕಿಗಳ ಮಾತು. ಸಮಾಜದಲ್ಲಿ ಹುಟ್ಟಿ ಸಮಾಜವನ್ನು ಹಾಳು ಮಾಡಿ, ತಾವೂ ಹಾಳಾಗಿ ಹೋಗುವ ಕುಹಕಿಗಳಿಗೇನೂ ನಮ್ಮಲ್ಲಿಂದು ಕೊರತೆಯಿಲ್ಲ. ಆದುದರಿಂದಲೇ ವಿಶ್ವವಿಂದು ವಿನಾಶದಂಚಿಗೆ ಬಂದು ನಿಂತಿರುವುದು. ಎಲ್ಲೆಲ್ಲೂ ಸ್ವಾರ್ಥ ಸಾಧನೆಯೇ ಮುಖ್ಯವಾಗಿರುವಾಗ, ನಿಸ್ವಾರ್ಥತೆಯಿಂದ ಸಮಾಜಸೇವೆಗೆ ತಮ್ಮನ್ನು ತಾವು ಮುಡಿಪಾಗಿಟ್ಟು, ಹಲವು ಮಜಲುಗಳಲ್ಲಿ ಜನಸೇವೆಯಲ್ಲಿ ತೊಡಗಿಸಿಕೊಂಡ ಮಹಾನ್ ನಾಯಕರ ಆದರ್ಶಗಳನ್ನು ಸ್ಮರಿಸಿ, ಪಾಲಿಸುವುದು ಸಮಯೋಚಿತ. ಹಲವು ದಶಕಗಳ ಹಿಂದೆಯೇ 'ಜನಸೇವೆಯೇ ಜನಾರ್ಧನ ಸೇವೆ' ಎಂದು ನಂಬಿ ಹಲವು ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿ, ಜನಮನದಲ್ಲಿ ಚಿರಂತನ ಚಿರಂಜೀವಿಯಾಗುಳಿದಿರುವ ಶ್ರೀ ತೋಟಂಬೈಲು ಮಾದಪ್ಪನವರ ಪರಿಚಯವನ್ನು ನಿಮ್ಮ ಮುಂದಿಡಲು 'ಸಂಗಾತಿ' ಬಯಸುತ್ತದೆ.

ಶ್ರೀ ತೋಟಂಬೈಲು ಮುದ್ದಪ್ಪ - ಚಿಣ್ಣಮ್ಮ ದಂಪತಿಗಳ ಮಗನಾಗಿ 1899 ರಲ್ಲಿ ಚೆಯ್ಯಂಡಾಣೆಯ ನರಿಯಂದಡ ಗ್ರಾಮದಲ್ಲಿ ಜನಿಸಿದ ಶ್ರೀ ಮಾದಪ್ಪನವರೂ ಆಗಿನ ಕಾಲದಲ್ಲೇ ಮಡಿಕೇರಿ ಸರ್ಕಾರಿ ಹೈಸ್ಕೂಲಿನಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿ ಅರಣ್ಯ ಇಲಾಖೆಯಲ್ಲಿ ಗುಮಾಸ್ತರಾಗಿ ಸೇವೆಗೆ ಸೇರಿ, ತಮ್ಮ ದಕ್ಷ ಹಾಗೂ ನಿಷ್ಠ ಸೇವೆಯಿಂದ ರೇಂಜರ್ ಹುದ್ದೆಗೆ ಬಡ್ತಿ ಪಡೆದು, ಅಲ್ಲಿಂದಲೇ ಐ.ಟಿ. ಎಫ್.ಗೆ ಸೇರಿ ಲೆಫ್ಟಿನೆಂಟ್ ಹುದ್ದೆಗೆ ತಲುಪಿ ಆ ಕಾಲದಲ್ಲೇ ಅತ್ಯುನ್ನತ ಘಟ್ಟವನ್ನು ತಲುಪಿದ ವ್ಯಕ್ತಿಯೆನಿಸಿದರು.

ಸರಕಾರಿ ಸೇವೆಯ ಉನ್ನತ ಹಂತದಲ್ಲಿದ್ದ ಮಾದಪ್ಪನವರಿಗೆ ಸಾಕಷ್ಟು ಸಂಪಾದನೆಯಿತ್ತು. ಕೂತುಂಡು ತಿಂದರೂ ಕರಗದ ಆಸ್ತಿಯಿತ್ತು. ಆದರೆ ಹಾಗೆ ಮಾಡುವುದರಿಂದ ಮಾನವ ಜನುಮಕ್ಕೇನೂ ಬೆಲೆಯಿರದು ಎಂಬ ಕಟುಸತ್ಯದ ಅರಿವು ಅವರಿಗಿತ್ತು. ಭೂಮಿಯಲ್ಲಿ ಹುಟ್ಟಿದ ಪ್ರತಿಯೊಂದು ಜೀವಿಯೂ ತನ್ನ ಆಹಾರವನ್ನು ಸಂಪಾದಿಸುತ್ತದೆ, ತಿಂದುಂಡು ಒಂದು ದಿನ ಸತ್ತು ಮಣ್ಣಲ್ಲಿ ಮಣ್ಣಾಗಿ ಹೋಗುತ್ತದೆ. ಆದರೆ ಅದನ್ನು ಮೀರಿ ತನ್ನ ಸುತ್ತಣ ಪರಿಸರಕ್ಕೆ ತನ್ನ ಕೈಲಾದ ಸೇವೆಯನ್ನು ಸಲ್ಲಿಸಿ, ತಾನು ಅಳಿದರೂ ತನ್ನ ಹೆಸರು ಉಳಿಯುವಂತೆ ಮಾಡುವ ಜೀವಿಯೇ ಮಾನವ ಜೀವಿ. ಈ 'ಮಾನವ ಧರ್ಮದ' ತಿರುಳನ್ನು ಮನನ ಮಾಡಿಕೊಂಡಿದ್ದ ಮಾದಪ್ಪನವರು ಸಲ್ಲಿಸಿದ ಸೇವೆ ನಿರೀಕ್ಷೆಗೂ ನಿಲುಕದಷ್ಟು. ಅವರು ಪ್ರವೇಶಿಸಿದ ಕ್ಷೇತ್ರಗಳು ಕಲ್ಪನೆಯ ಕಡಲನ್ನು ಮೀರಿಸುವಷ್ಟು. ಇವರು ಮೊಟ್ಟಮೊದಲು ಭಾರತದ ಕೃಷಿ ಸಮಾಜದ ನಿರ್ದೇಶಕರಾಗಿ, ನಂತರ ಮೈಸೂರು ಪ್ರಾಂತೀಯ ಪ್ಲಾಂಟರ್ಸ್ ಸಂಘದ ನಿರ್ದೇಶಕರಾಗಿ, ಕೊಡಗು ಜಿಲ್ಲಾ ರೆಡ್‌ಕ್ರಾಸ್‌ಸಂಸ್ಥೆಯ ನಿರ್ದೇಶಕರಾಗಿ, ಕೊಡಗು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್‌ಸಂಸ್ಥೆಯ ಉಪಾಧ್ಯಕ್ಷರಾಗಿ, ಕೊಡಗು ಏಲಕ್ಕಿ ಸಂಘದ ನಿರ್ದೇಶಕರಾಗಿ, ಗುಹ್ಯ ಅಗಸ್ಥೇಶ್ವರ ಸಹಕಾರ ಸಂಘದ ಅಧ್ಯಕ್ಷರಾಗಿಯೂ, ಕಾವೇರಿ ಆಶ್ರಮದ ಉಪಾಧ್ಯಕ್ಷರಾಗಿಯೂ ಸೇವೆಯನ್ನು ಸಲ್ಲಿಸಿದ್ದಾರೆ.

ರಾಜಕೀಯದಲ್ಲೂ ತಮ್ಮನ್ನು ತಾವು ತೊಡಗಿಸಿಕೊಂಡಿದ್ದ ಮಾದಪ್ಪನವರು ಪ್ರಪ್ರಥಮವಾಗಿ ಗ್ರಾಮಪಂಚಾಯಿತಿ ಚುನಾವಣೆಯಲ್ಲಿ ಚುನಾಯಿತರಾಗಿ ಸಿದ್ದಾಪುರದ ಗ್ರಾಮ ಪಂಚಾಯಿತಿ ಅಧ್ಯಕ್ಷರಾದರು. ಗ್ರಾಮ ಪಂಚಾಯಿತಿ ಅಧ್ಯಕ್ಷರಾದ ಮೇಲೆ ಇವರು ನಡೆದುಕೊಂಡ ರೀತಿ, ಪ್ರಾಯಶಃ ಇಂದು ಪ್ರತಿಯೊಬ್ಬ ಭಾರತದ ರಾಜಕಾರಣಿಗೆ ಆದರ್ಶಪ್ರಾಯವಾದುದು. ಜನಸೇವೆಯ ಭರವಸೆ ನೀಡಿ ಅಧಿಕಾರಕ್ಕೇರಿದ ಇವರು ಜನಸೇವೆ ಮಾಡಿದ್ದು ಜನರ ಹಣದಿಂದಾಗಲಿ ಅಥವಾ ಸರಕಾರದ ಹಣದಿಂದಾಗಲೀ ಅಲ್ಲ. ತಮ್ಮ ಕೈಯಿಂದಲೇ ಹಣವನ್ನು ಖರ್ಚು ಮಾಡಿ ಅಲ್ಲಿನ ಪುರ ನಿವಾಸಿಗಳಿಗೆ ಕುಡಿಯುವ ನೀರಿನ ವ್ಯವಸ್ಥೆ ಮಾಡಿದ್ದೇ ಅಲ್ಲದೆ. ಸಿದ್ದಾಪುರದಲ್ಲಿ ಪಶು ಆಸ್ಪತ್ರೆಯೊಂದನ್ನು, ನಿರ್ಮಿಸುವುದಕ್ಕಾಗಿ ತಮ್ಮ ತಂದೆ ಮುದ್ದಪ್ಪನವರ ಜ್ಞಾಪಕಾರ್ಥ ಸ್ಥಳ ದಾನ ಮಾಡಿದ್ದಲ್ಲದೆ, ಎರಡು ಕೊಠಡಿಗಳನ್ನು ತಮ್ಮ ಸ್ವಂತ ಖರ್ಚಿನಲ್ಲಿ ನಿರ್ವಹಿಸಿ, ಜನಮನ ಗೆದ್ದರು. ಮುಂದೆ ತಾಲ್ಲೂಕು ಬೋರ್ಡಿನ ಸದಸ್ಯರಾಗಿಯೂ ಆಯ್ಕೆಗೊಂಡರು. ಸಿದ್ದಾಪುರ ಪ್ರೌಢ ಶಾಲೆಯ ಸ್ಥಾಪಕ ಅಧ್ಯಕ್ಷರಾಗಿದ್ದ ಶ್ರೀಯುತರ ಸರಕಾರದಿಂದ ಅದಕ್ಕೆ ಅನುಮತಿಯನ್ನು ಗಿಟ್ಟಿಸುವಲ್ಲಿ ಸಫಲರಾದುದ್ದೇ ಅಲ್ಲದೆ, ಅದಕ್ಕೂ ಒಂದು ಕೊಠಡಿಯನ್ನು ಉದಾರವಾಗಿ ಕಟ್ಟಿಸಿಕೊಟ್ಟು ದಾನದಾತರೆನಿಸಿಕೊಂಡಿದ್ದಾರೆ. ಭಾಗಮಂಡಲದ ತಲಕಾವೇರಿ ಕುಂಡಿಕೆಯಲ್ಲಿ ಶ್ರೀಕಾವೇರಿ ಮಾತೆಯ ಮೂರು ಅಡಿ ಎತ್ತರದ ದೇವಿ ವಿಗ್ರಹವನ್ನು ಕಟ್ಟಿಸಿದ್ದು ಇವರ ದಾನೀಯ ಮನೋಭಾವನೆಗೆ ಜ್ವಲಂತ ನಿದರ್ಶನವೆನ್ನಬಹುದು.

ಗೌಡ ಜನಾಂಗದ ಅಭಿವೃದ್ಧಿಗೂ ಇವರ ಸೇವೆ ಅನುಪಮವಾದುದು. ಕೊಡಗಿನ ಗೌಡ ಜನಾಂಗದ ಬಡ ವಿದ್ಯಾರ್ಥಿಗಳ ಏಳಿಗೆಗಾಗಿ ಸ್ಥಾಪಿಸಲಾಗಿರುವ ಗೌಡ ವಿದ್ಯಾ ಸಂಘದ ಅಧ್ಯಕ್ಷರಾಗಿ 1956 ರಿಂದ 1958ರ ತನಕ ಎರಡು ವರ್ಷಗಳ ಕಾಲ ಸೇವೆ ಸಲ್ಲಿಸಿದ ಇವರು, ವಿದ್ಯಾನಿಧಿಗೂ, ಸಾಕಷ್ಟು ಧನಸಹಾಯ ಮಾಡಿದ ಮಹಾತ್ಮರು.

ಇವರದು ಆಗಿನ ಕಾಲದಲ್ಲಿ ಅಷ್ಟೇನೂ ದೊಡ್ಡದಲ್ಲದ ಸಾಮಾನ್ಯ ಸಂಸಾರವಾಗಿದ್ದು ನಾಲ್ಕು ಗಂಡು ಮತ್ತು ಮೂರು ಹೆಣ್ಣುಮಕ್ಕಳನ್ನು ಹೊಂದಿದ್ದರು. ಹಿರಿಯ ಪುತ್ರ ತೋಟಂಬೈಲು ಬೆಳ್ಯಪ್ಪನವರು ಸ್ನಾತಕೋತ್ತರ ಪದವೀಧರರು, ಚಿಕ್ಕಮಗಳೂರಿನ ಪ್ರೇಮಾರವರನ್ನು ವಿವಾಹವಾಗಿರುವ ಇವರು ಲಯನ್ಸ್

ಸೇವಾಸಂಸ್ಥೆಯ ರಾಜ್ಯಪಾಲರಾಗಿ ಸೇವೆ ಸಲ್ಲಿಸಿದ್ದಲ್ಲದೆ ಬೆಂಗಳೂರಿನ ಕೊಡಗು ಗೌಡ ಸಮಾಜದಲ್ಲಿ ಐದು ಬಾರಿ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ. ಮತ್ತೊಬ್ಬ ಪುತ್ರ ತೋಟಂಬೈಲು ನಾಣಯ್ಯನವರು, ಬಿ.ಎಸ್ಸಿ. ಬಿ.ಎಲ್. ಪದವೀಧರರಾಗಿದ್ದು ಕುಂಭಗೌಡನ ಮುದ್ದಪ್ಪನವರ ಮಗಳು ಶಾರದಾರವರನ್ನು ವಿವಾಹವಾಗಿದ್ದು 1992ರಿಂದೀಚೆಗೆ ಕೊಡಗು ಗೌಡ ಸಮಾಜದ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಸಿದ್ದಾಪುರ ಪದವಿಪೂರ್ವ ಕಾಲೇಜಿನಲ್ಲಿ 1984ರಿಂದೀಚೆಗೆ ಅಧ್ಯಕ್ಷರಾಗಿ ಸೇವೆ ಸಲ್ಲಿಸುತ್ತಿದ್ದಾರೆ, ಸಿದ್ದಾಪುರ ಲಯನ್ಸ್ ಸಂಸ್ಥೆ ಉಪರಾಜ್ಯಪಾಲ ರಾಗಿಯೂ ಎರಡು ಬಾರಿ ಸೇವೆ ಸಲ್ಲಿಸಿದ್ದಾರೆ. ಇನ್ನೊಬ್ಬ ಪುತ್ರ ತೋಟಂಬೈಲು ಮುದ್ದಪ್ಪನವರು ಪೈಕೆ ಅಪ್ಪಯ್ಯನವರ ಮಗಳು ಶಾರದಾರವರನ್ನು ವಿವಾಹವಾಗಿದ್ದು ಬೆಂಗಳೂರಿನ ಮಲ್ಯ ಆಸ್ಪತ್ರೆಯಲ್ಲಿ ಸೇವಾ ನಿರತರಾಗಿದ್ದಾರೆ. ತೋಟಂಬೈಲು ಮೋಹನ್‌ರವರು ಸಂಪಾಜೆಯ ಮಡಾವು ಮುತ್ತಪ್ಪನವರ ಮಗಳು ಜಯಶ್ರೀಯವರನ್ನು ವಿವಾಹವಾಗಿದ್ದು ಲಯನ್ಸ್ ಸಂಸ್ಥೆಯ ಅಧ್ಯಕ್ಷ ಹಾಗೂ ಉಪರಾಜ್ಯಪಾಲರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಪುತ್ರಿಯರಾದ ಬೋಜಮ್ಮನವರು ಕುಕ್ಲೂಳಿ ಡಾ. ಬೋಪಣ್ಣನವರನ್ನು ವಿವಾಹವಾಗಿದ್ದಾರೆ. ಶಾಂತಿಯವರು ಕೆದಂಬಾಡಿ ಆನಂದರವರನ್ನು ಮತ್ತು ಪ್ರೇಮರವರು ಚೀಯಂಡಿ ಬಸಪ್ಪರವರನ್ನು ವಿವಾಹವಾಗಿದ್ದು ಸ್ಥಿತಿವಂತಿಕೆಯ ಜೀವನ ನಿರ್ವಹಿಸುತ್ತಿದ್ದಾರೆ.

ಮಾದಪ್ಪನವರ ಸೇವೆಯನ್ನು, ದುಡಿತದ ಹಾದಿಯನ್ನು ಗಮನಿಸಿದರೆ ಇವರು ಇನ್ನು ಸಮಾಜದಲ್ಲಿ, ರಾಜಕೀಯದಲ್ಲಿ ಉನ್ನತಸ್ಥಾನಕ್ಕೇರಬಹುದಿತ್ತೇನೊ ಎಂಬ ಸಂಶಯ ಬಾರದಿರದು. ಆದರೆ ನೇರ ನಡೆ ನುಡಿಯ ವ್ಯಕ್ತಿತ್ವವನ್ನು ಮತ್ತು ಕಂಡದ್ದನ್ನು ಕಂಡಂತೆಯೇ ಖಂಡಿಸುವ ನಿಲುವನ್ನು ಹೊಂದಿದ್ದ ಇವರನ್ನು ಬೆಳೆಯಬಿಟ್ಟರೆ, ತಮ್ಮ ಸ್ವಾರ್ಥ ಸಾಧನೆಗೆ ಅಡ್ಡಿಯಾಗುತ್ತದೆಂದು ಭಾವಿಸಿದ ಸ್ವಾರ್ಥಿಗಳು ಇವರನ್ನು ಬೆಳೆಯಬಿಡಲಿಲ್ಲವೆಂದು ಇವರ ಸಮಕಾಲೀನರೊಬ್ಬರು ಅಭಿಪ್ರಾಯ ಪಡುತ್ತಾರೆ. ಅದೇನೆ ಇರಲಿ 1969 ನವೆಂಬರ್ 5ರಂದು ನಿಧನ ಹೊಂದಿದ ಗೌಡ ಚೇತನ ನಮ್ಮನ್ನಗಲಿ ಇಂದಿಗೆ ಸುಮಾರು 32 ವರ್ಷಗಳಾದವು, ಸಿದ್ದಾಪುರದ ಪಶು ಆಸ್ಪತ್ರೆ, ಕಾಲೇಜು, ಜನಮನ ಅವರ ಸೇವೆಯನ್ನು ದಿನ ದಿನವೂ ನೆನೆಯುತ್ತದೆ. ಮಹಾಪುರುಷರ ಆತ್ಮಶಾಂತಿಗೆ ಇದಕ್ಕಿಂತ ಇನ್ನೇನು ಬೇಕು?

---

## 'ಅರೆಗನ್ನಡ' ಭಾಷೆ (ಅರೆಬಾಸೆ) ಗೌಡ ಜನಾಂಗ ಭಾಷೆ :

ತೋಟಂಬೈಲು ನಾಣಯ್ಯ

ಗೌಡ ಜನಾಂಗದ ಭಾಷೆ, ಜನಾಂಗ, ಭೂ ಎಲ್ಲೆ ಮೀರಿ ಬೆಳೆದಿರುವುದರಿಂದ ಅದರ ಬಗ್ಗೆ ದೃಢ ನಿರ್ಧಾರ ತಳೆಯಲು ಸಾಧ್ಯವಾಗಿಲ್ಲ. ಗೌಡ ಕನ್ನಡವೆಂದರೆ ಅದನ್ನು ಒಂದೇ ಜನಾಂಗಕ್ಕೆ ಸೀಮಿತಗೊಳಿಸಿದಂತಾಗುತ್ತದೆ. ಅರೆಭಾಷೆ ಎಂದರೆ ಕೆಲವರು ಅರ್ಧಭಾಷೆ ಎಂದು ವ್ಯಂಗ್ಯವಾಡುತ್ತಾರೆ. ಆದುದರಿಂದ 'ಅರೆಗನ್ನಡ' ಭಾಷೆ ನಮ್ಮದು ಎಂದು ಹೇಳುವುದು ಹೆಚ್ಚು ಸಮಂಜಸ ವಾಗುತ್ತದೆ. ಸರಕಾರೀ ಜನಗಣತಿ ಕಡತದಲ್ಲಿ ಅದನ್ನೇ ಸೇರಿಸಲಾಗಿದೆ. ಮುಂದೆ 'ಅಖಿಲ ಗೌಡ ಒಕ್ಕೂಟ' ರಚನೆಯಾಗಲಿದೆ. ಅದು ರಚನೆಯಾದ ಬಳಿಕ, ಭಾಷೆ, ಸಂಸ್ಕೃತಿ, ಸಂಪ್ರದಾಯ, ನಿಲುವು ಮೊದಲಾದ ವಿಷಯಗಳ ಬಗ್ಗೆ ದೃಢಸಂಕಲ್ಪ ತಳೆಯಲಾಗುವುದು ಎಂದು ಮಡಿಕೇರಿ ಗೌಡ ಸಮಾಜ ಅಧ್ಯಕ್ಷರಾದ ಶ್ರೀ ತೋಟಂಬೈಲು ನಾಣಯ್ಯನವರು ಭರವಸೆ ನೀಡಿದ್ದಾರೆ.

ಅವರನ್ನು 'ಕೊಡಗು ಸಂಗಾತಿ'ಯ 20ನೇ ಸಂಚಿಕೆಯಲ್ಲಿ ಪ್ರಕಟಣೆಗೊಂಡ 'ಗೌಡ ಜನಾಂಗಕ್ಕೆ ಕೊಡವ ಸಾಹಿತ್ಯ ಅಕಾಡೆಮಿ ಅಧ್ಯಕ್ಷರ ಕಿವಿಮಾತು' ಶೀರ್ಷಿಕೆಯಡಿ ಪ್ರಕಟಗೊಂಡ ವರದಿಗೆ ಸಂಬಂಧಿಸಿದಂತೆ, ಪ್ರತಿಕ್ರಿಯಿಸುವಂತೆ ಸಂಗಾತಿಯು ಕೇಳಿಕೊಂಡಾಗ ಈ ಮೇಲಿನ ಭರವಸೆ ನೀಡಿದರಲ್ಲದೆ, ಜನಾಂಗದ ಯುವ ಪ್ರತಿಭೆಗಳನ್ನು ಪ್ರೋತ್ಸಾಹಿಸಲು ಸಮಾಜದ ವತಿಯಿಂದ ಅಗತ್ಯ ಕ್ರಮ ಕೈಗೊಳ್ಳುವುದಾಗಿ ತಿಳಿಸಿದರು. 'ಗೌಡ ಒಕ್ಕೂಟ' ರಚನೆಗಾಗಿ ಗೌಡ ಸಮಾಜ ಉತ್ಸುಕವಾಗಿದ್ದು ಇತರ ಸಂಸ್ಥೆಗಳೂ ಶೀಘ್ರವಾಗಿ ಕಾರ್ಯಪ್ರವೃತ್ತರಾಗಬೇಕಿದೆ ಎಂದು ತಿಳಿಸಿದರು. ಕೊಡಗಿನಲ್ಲಿ ಒಂದೆಡೆ ಸಂಸ್ಕೃತಿ, ಸಂಪ್ರದಾಯಗಳ ರಕ್ಷಣೆ ನಡೆಯುತ್ತಿದ್ದರೆ, ಮತ್ತೊಂದೆಡೆ ಕೊಡಗಿನ 'ಸಾಮಾನ್ಯ ಸಮಸ್ಯೆ'ಗಳ ನಿವಾರಣೆಗಾಗಿ ಎಲ್ಲಾ ಜನಾಂಗಗಳ ಜನರೂ ಸರಕಾರದ ವಿರುದ್ಧ ಸಮರ ಸಾರಬೇಕಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಬರಹ : **ಪಟ್ಟಡ ಶಿವಕುಮಾರ್**

---

## ಸಾರ ಮಾತ್ರ ಮುಖ್ಯ

ಝೇಂಕಾರ ಮಾಡಿಕಂಡ್ ಹೂವುನ ಮೇಲೆ ಕೂರುವ ಜೇನ್‌ಹುಳ. ನಮಿಗೆ ಒಂದ್ ಪಾಠ ಹೇಳ್ದೆ. ಆ ಜೇನ್‌ಹುಳ ಹೂವುನ ಮುಟ್ಟಿ ಮೇಲೆ ಬಿದ್ದರೂ ಹೂವಿನ ರಂಗ್‌ಗಾಗಲೀ ಅದರ ಗಮನಕ್ಕಾಗಲೀ ಅದರ ಆಕಾರಗನಾಗಲೀ ಕೆಡ್ಸುದುಲೆ. ಅಲ್ಲದೆ ಆ ಹೂವಿನ ಕೋಮಲತೆಗೆ ತನ್ನ ಮನ್ಸ್‌ನ ಒಪ್ಪಿಸಿ ಅದರತಲೆನ ಕೆಡ್ಸುದುಲೆ. ತನಿಗೆ ಬೇಕಾದಹೂವಿನ ಮಕರಂದನ ಹೀರಿ ಸಂಗ್ರಹ ಮಾಡಿಕಂಡ್ ಒಂದ್ ಕ್ಷಣನೂ ಹಾಳಾಗದಂಗೆ ತನ್ನ ಕೆಲ್ಸನ ಮಾಡಿಕಂಡದೆ. ಹಂಗೇನೇ ಮನ್ಸು ಕೂಡಾ ಪ್ರತೀ ಒಂದರಲ್ಲೂ ಅದರ ಸಾರ ಮಾತ್ರನ ತಕಂಡ್ ಬಾಕಿನ ಅಲ್ಲೇ ಬುಟ್ಟುಬುಡಕ್ಕು. ಹೊರಗಿನ ಬಣ್ಣಕ್ಕೆ ಪೊರ್ಲಾಗಿ ಮರುಳಾಗವು ಚರ್ಚೆಗೆ, ಸಭೆಗೆ ಬಂದ್ ಚರ್ಚೆ ಮಾಡದೆ,ಮಾತಾಡದೆ, ಜನರ್ ಉಡ್‌ಪ್ ತೊಡ್‌ಪ್‌ನ ನೋಡಿಕಂಡ್ ತನ್ನ ತಾನೇ ಮರ್ತಂಗೆ. ಕಾರ್ಯದ ಸಾರ ಮುಖ್ಯ.

ಕೊಡವ ಭಾಷೆಲಿ : **ಚಂದ್ರಿಮಾಡ ಜಿ. ಮುತ್ತಪ್ಪ**

ಅರೆಭಾಷೆಗೆ : **ಪಟ್ಟಡ ಪ್ರಭಾಕರ**

---

**ಆಗೋದು ಹೋಗೋದುದೈವೇಚ್ಛೆ. ಹೂಡೋದು ಬಿತ್ತೋದು ತನ್ನಿಚ್ಛೆ**

# ಕೊಡಗು ಮತ್ತು ದಕ್ಷಿಣ ಕನ್ನಡ ಗೌಡಸಮಾಜ - ಬೆಂಗಳೂರು

**(ವಾರ್ಷಿಕ ಸಮಾರಂಭಾ, ಸೆಪ್ಟಂಬರ್ 16, 2001ರಲ್ಲಿ ನಡೆಯಿತು.)**

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ನಮ್ಮ ಸಮಾಜದ ಬಂಧುಗಳ ಏಳಿಗೆಗಾಗಿ ಅನೇಕ ಸಮಾಜಗಳು ಹುಟ್ಟಿಕೊಂಡು ಅವರ ಉನ್ನತಿಗೋಸ್ಕರ, ಸ್ವಾತಂತ್ರ್ಯದ ಪೂರ್ವದಲ್ಲಿ ಮತ್ತು ಸ್ವಾತಂತ್ರ್ಯದ ನಂತರ ಹುಟ್ಟಿಕೊಂಡಿವೆ. ಬೆಂಗಳೂರಿನಿಂದ ಮಂಗಳೂರಿನವರೆಗೆ, ಮಡಿಕೇರಿಯಿಂದ ಮೈಸೂರವರೆಗೆ, ಹಾಸನದಿಂದ ಪಿರಿಯಾಪಟ್ಟಣದವರೆಗೂ ಹೀಗೆ ಹತ್ತು ಹಲವು ನಮ್ಮ ಗೌಡ ಸಮಾಜವು ತಲೆಯೆತ್ತಿ ಕಾರ್ಯೋನ್ಮುಖವಾಗಿದೆ. ಆದರೆ ನಾನು ಕಂಡಿರುವ ಹಾಗು ಕೇಳಿರುವ ಸಮಾಜಗಳಲ್ಲಿ ಬಹಳ ವೈಶಿಷ್ಟ್ಯಪೂರ್ಣವೂ ಅರ್ಥಪೂರ್ಣವೂ ಹಾಗು ರಚನಾತ್ಮಕವಾಗಿಯೂ ಸತ್ವಪೂರ್ಣವಾಗಿಯೂ ಕಾರ್ಯ ನಿರ್ವಹಿಸುತ್ತಿರುವ ಸಮಾಜವೆಂದರೆ ಬೆಂಗಳೂರಿನಲ್ಲಿ ನೆಲೆಯೂರಿರುವ ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜವೇ ಆಗಿದೆ.

ಈ ಸಮಾಜವು 1960ರ ದಶಕದಲ್ಲಿ ಬೆಂಗಳೂರಿಗೆ ಉದ್ಯೋಗಾವಕಾಶವನ್ನು ಹುಡುಕಿಕೊಂಡು ಬಂದು ನೆಲೆಸಿದ ಹಿರಿಯರ ಪರಿಶ್ರಮದ ಫಲ. ಕಷ್ಟ, ಸಂಕಷ್ಟಗಳಿಂದ, ಅತೀ ಪರಿಶ್ರಮದಿಂದ ಒಂದು ನಿವೇಶನವನ್ನು ಪಕಡೆದು, ಈ ಸಮಾಜದ ಕೂಸಾದ ಕೆಂಪೇಗೌಡ ರೂರಲ್ ಹೌಸ್ ಬಿಲ್ಡಿಂಗ್ ಕೋ ಆಪರೇಟಿವ್ ಸೊಸೈಟಿಯ ಕೃಪೆಯಿಂದ ಒಂದು ತಿಂಗಳಿಗೆ ಸುಮಾರು ರೂ. 30,000 ಆದಾಯ ಬರುತ್ತಿದೆ.

ನಿವೇಶನವನ್ನು ಪಡೆದು ಕಟ್ಟಡವನ್ನು ಕಟ್ಟಿದ ಮಾತ್ರಕ್ಕೆ ಇದೊಂದು ವಿಶಿಷ್ಟಪೂರ್ಣ ಸಮಾಜವೆಂದು ಅನಿಸದು. ಈ ಸಮಾಜದ ವಿಶೇಷತೆಯೆಂದರೆ 1994ರಿಂದಲೂ ಅಂದರೆ ಸುಮಾರು 7 ವರ್ಷಗಳಿಂದಲೂ ತನ್ನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ ಕರ್ನಾಟಕದ ರಾಜಧಾನಿಯಾದ ಬೆಂಗಳೂರು ಎಂಬ ಮಾಯಾನಗರಿಯಲ್ಲಿ ಯಾಂತ್ರಿಕ ಜೀವನದಿಂದ ನಮ್ಮ ಬಂಧುಗಳನ್ನು ಹೊರತರಲು ಅನೇಕ ಕಾರ್ಯಕ್ರಮಗಳನ್ನು ಹಾಲಿ ಸಮಾಜದ ಅಧ್ಯಕ್ಷರಾದ ಶ್ರೀ ದಂಬೇಕೋಡಿ ಆನಂದರವರ ಘನ ನಾಯಕತ್ವದಲ್ಲಿ ಹಾಕಿಕೊಳ್ಳುತ್ತಾ ದಾಪುಗಾಲಿಡುತ್ತಾ ಬಂದಿದೆ.

'ಕೊಡಗು ಸಂಗಾತಿ'ಗೋಸ್ಕರವೇ ಬರೆದ ಈ ವಿಶೇಷ ಲೇಖನದಲ್ಲಿ ಈ ಸಮಾಜದ 2000-01ರ ಚಟುವಟಿಕೆಗಳ ಒಂದು ಪಕ್ಷಿನೋಟವನ್ನು ಕೊಡಲಿಚ್ಛಿಸುತ್ತೇನೆ.

ಈ ವರ್ಷದ ಕಾರ್ಯ ಚಟುವಟಿಕೆ ಆರಂಭವಾದ್ದುದ್ದು ಆಗಸ್ಟ್ 5, 2001ರಂದು ಕ್ರೀಡಾ ಪಂದ್ಯಾಟದೊಂದಿಗೆ. ಈ ಕ್ರೀಡಾ ಪಂದ್ಯಾಟದಲ್ಲಿ ಮಹಿಳೆಯರಿಗೆ ತ್ರೋಬಾಲ್, ಮಕ್ಕಳಿಗೆ ಕ್ರಿಕೆಟ್ ಹಾಗು ಪುರುಷರಿಗೆ ವಾಲಿಬಾಲ್ ಸ್ಪರ್ಧೆಗಳನ್ನು ಬಿ.ಇ.ಎಲ್.ನ ಅಂಬೇಡ್ಕರ್ ಕ್ರೀಡಾಂಗಣದಲ್ಲಿ ಕೃಷಿ ವಿಶ್ವವಿದ್ಯಾನಿಲಯದ ಉಪನಿರ್ದೇಶಕರಾದ ಶ್ರೀ ಕೆದಂಬಾಡಿ ಸೋಮಣ್ಣರವರು ಉದ್ಘಾಟಿಸಿದರು. ಈ ಕ್ರೀಡಾಕೂಟದಲ್ಲಿ ಸುಮಾರು 500ಕ್ಕಿಂತಲೂ ಹೆಚ್ಚು ಸ್ಪರ್ಧಿಗಳು ಭಾಗವಹಿಸಿದ್ದು ಒಂದು ವಿಶೇಷ. ಗೌಡವತಿಯರು ತಮ್ಮ ದೈನಂದಿನ ಕೆಲಸಗಳನ್ನು ತೊರೆದು ಅತೀ ಉತ್ಸಾಹದಿಂದ ಭಾಗವಹಿಸಿದ್ದರು.

ಇದಾದ ನಂತರ 9-8-2001 ರಂದು ಪ್ರತಿಷ್ಠಿತ ಬೆಂಗಳೂರಿನ ನೃಪತುಂಗ ರಸ್ತೆಯಲ್ಲಿರುವ ಯವನಿಕ ಸಭಾಂಗಣದಲ್ಲಿ ಸಾಂಸ್ಕೃತಿಕ ಸ್ಪರ್ಧೆ ಹಾಗು 1-9-2001 ರಂದು ರವೀಂದ್ರ ಕಲಾಕ್ಷೇತ್ರದಲ್ಲಿ ನಡೆಯುವ ಸಾಂಸ್ಕೃತಿಕ ಸ್ಪರ್ಧೆಯ ಆಯ್ಕೆ ಕಾರ್ಯಕ್ರಮವನ್ನು ಉದ್ಘಾಟಿಸಿದವರು ಈ ಸಮಾಜದ ಉಪಾಧ್ಯಕ್ಷರಾದ ಟಿ. ತಿಮ್ಮಪ್ಪಗೌಡರು. ಈ ಕಾರ್ಯಕ್ರಮದಲ್ಲಿ ಗೌಡವತಿಯರು, ಮಹನೀಯರು, ಮಕ್ಕಳು ಅತೀ ಉತ್ಸಾಹದಲ್ಲಿ ವಯಸ್ಸಿನ ಭೇದ-ಭಾವವಿಲ್ಲದೆ, ಭಾವಗೀತೆ, ಭಕ್ತಿಗೀತೆ, ಜಾನಪದ ಗೀತೆ, ಚಲನಚಿತ್ರಗೀತೆ, ಸೋಬಾನೆಗಳನ್ನು ಸುಮಧುರವಾಗಿ ಹಾಡಿದರಲ್ಲದೆ ಭಾರತೀಯ ಹಾಗೂ ಪಾಶ್ಚಿಮಾತ್ಯ ನೃತ್ಯ ಹಾಗೂ ಜಾನಪದ ನೃತ್ಯಗಳನ್ನು ಏಕಪಾತ್ರಾಭಿನಯ ಮಾಡಿ ಸಭಾಂಗಣದಲ್ಲಿ ತುಂಬಿ ತುಳುಕುತ್ತಿದ್ದ ಬಂಧುಗಳನ್ನು ರಂಜಿಸಿದರು. ಚಿಣ್ಣರ ಛದ್ಮಾವೇಷವಂತೂ ನಯನ ಮನೋಹರವಾಗಿತ್ತು. ಈ ಕಾರ್ಯಕ್ರಮವನ್ನು ಸಮಾಜದ ಆಡಳಿತ ಮಂಡಳಿಯವರು ಅತೀ ಸಮರ್ಪಕವಾಗಿ ನಡೆಸಿಕೊಟ್ಟದ್ದು ಇನ್ನೊಂದು ವಿಶೇಷವಾಗಿತ್ತು. ಈ ಕಾರ್ಯಕ್ರಮ ಬೇರೆ ಯಾವ ಕಾರ್ಯಕ್ರಮಕ್ಕೂ ಕಡಿಮೆಯಿಲ್ಲ ಎನ್ನುವುದು ನನ್ನ ಅಭಿಪ್ರಾಯ ಮಾತ್ರವಲ್ಲದೇ ಇತರ ಬಂಧುಗಳ ಅಭಿಪ್ರಾಯವೂ ಆಗಿತ್ತು. ಸ್ಥಳದಲ್ಲಿ ಚಿತ್ರ ಬರೆಯುವ ಸ್ಪರ್ಧೆಯಲ್ಲಿ ಸುಮಾರು 50ಕ್ಕೂ ಹೆಚ್ಚು ವಿದ್ಯಾರ್ಥಿ-ವಿದ್ಯಾರ್ಥಿನಿಯರು ಭಾಗವಹಿಸಿದ್ದರು. ಬಂಧುಗಳ ಜ್ಞಾನವನ್ನು ಅಳೆಯುವ ಹಂತದಲ್ಲಿ ಅಂದರೆ ಲಿಖಿತ ಹಾಗು ಮೌಖಿಕ ವಿಭಾಗಗಳಲ್ಲಿ ಅಚ್ಚುಕಟ್ಟಾಗಿ ನಡೆಸಿಕೊಡಲಾಯಿತು.

ಇದಾದ ನಂತರ 26-9-2001 ರಂದು ಭಾನುವಾರ ಬಿ.ಇ.ಎಲ್.ನ ಅಂಬೇಡ್ಕರ್ ಕ್ರೀಡಾಂಗಣದಲ್ಲಿಯೇ ಭಾರಿ ಪ್ರಮಾಣದಲ್ಲಿ ಕ್ರೀಡಾಕೂಟವನ್ನು ಏರ್ಪಡಿಸಲಾಯಿತು. ಈ ಕ್ರೀಡಾಕೂಟವನ್ನು ಈಗ ತಾನೇ ಪಾದಾರ್ಪಣೆ ಮಾಡಿದ ಅಂತರ್ರಾಷ್ಟ್ರೀಯ ಹಾಕಿ ಕ್ರೀಡಾಪಟು ಕಾಳೇರಮ್ಮನ ರಾಯ್ ಫಾಲಾಕ್ಷರವರ ಅನುಪಸ್ಥಿತಿಯಲ್ಲಿ ಉದ್ಘಾಟಿಸಿದವರು ವಾಣಿಜ್ಯ ತೆರಿಗೆಯ ಸಹಾಯಕ ಆಯುಕ್ತರು ಹಾಗೂ ಕೆಂಪೇಗೌಡ ರೂರಲ್ ಹೌಸ್ ಬಿಲ್ಡಿಂಗ್ ಕೋ ಆಪರೇಟಿವ್ ಸೊಸೈಟಿಯ ಹಾಲಿ ಅಧ್ಯಕ್ಷರಾದ ಶ್ರೀ ನಂಗಾರು ನಾಣಯ್ಯರವರು ಹಾಗು ನಿವೃತ್ತ ಡಿ.ವೈ.ಎಸ್.ಪಿ. ಕಾಳೇರಮ್ಮನ ಶ್ರೀ ನಾಣಯ್ಯನವರು. ಈ ಕ್ರೀಡಾಕೂಟದಲ್ಲಿ ಸುಮಾರು 600ಕ್ಕೂ ಹೆಚ್ಚು ಕ್ರೀಡಾಪಟುಗಳು, ಕ್ರೀಡಾಭಿಮಾನಿಗಳು, ಕ್ರೀಡಾಪೋಷಕರು ಬಂದು ಓಡಿ, ಜಿಗಿದು, ಹಾರಿ, ಗುಂಡು ಎಸೆದು ತುಂಬು ಹೃದಯದಿಂದ

ಭಾಗವಹಿಸಿದರು. ಸಾಂಪ್ರದಾಯಿಕ ಸ್ಪರ್ಧೆಗಳಾದ ಕಾಯಿಗೆ ಗುಂಡು ಹೊಡೆಯುವುದು, ಕಾಯಿಗೆ ಕಲ್ಲು ಎಸೆಯುವ ಸ್ಪರ್ಧೆಗಳಲ್ಲೂ ಕೂಡ ಹಿರಿಯ, ಕಿರಿಯ, ಮೇಲೂ, ಕೀಳೂ, ಬಡವ, ಶ್ರೀಮಂತವೆನ್ನದೇ ಭಾಗವಹಿಸುತ್ತಿದ್ದುದ್ದು ಹಬ್ಬದ ವಾತಾವರಣವನ್ನೇ ಸೃಷ್ಟಿ ಮಾಡಿತು.

ತದನಂತರದಲ್ಲಿ, ಬಹಳ ವಿಶಿಷ್ಟಪೂರ್ಣವಾದ 'ಸಾಂಸ್ಕೃತಿಕ ಸಂಜೆ' ಕಾರ್ಯಕ್ರಮವನ್ನು ಕರ್ನಾಟಕದಲ್ಲಿ ಅತೀ ಪ್ರಸಿದ್ಧವಾದ ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಲಾಯಿತು. ಇದರ ಅಧಿಕೃತ ಪ್ರಾಯೋಜಕರೆಂದರೆ ಬೆಂಗಳೂರಿನಲ್ಲಿಯೇ ನೆಲೆಸಿರುವ ನಂಗಾರು ಕುಟುಂಬಸ್ತರು. ಈ ಸಮಾರಂಭವನ್ನು ಉದ್ಘಾಟಿಸಿದವರು ಖ್ಯಾತ, ಚಲನಚಿತ್ರ ನಾಯಕ ನಟ, ಮಂಡ್ಯದ ಲೋಕಸಭಾ ಸದಸ್ಯರಾದ ರೆಬೆಲ್ ಸ್ಟಾರ್ ಎಂದೇ ಖ್ಯಾತಿಯಾಗಿರುವ ಶ್ರೀಮಾನ್ ಅಂಬರೀಷ್‌ರವರು. ಇನ್ನೊಬ್ಬ ಮುಖ್ಯ ಅತಿಥಿಯೆಂದರೆ ಬೆಂಗಳೂರು ನಗರಪಾಲಿಕೆಯ ಉಪಾಯುಕ್ತ, ದಕ್ಷ ಅಧಿಕಾರಿ, ಕವಿ, ಸುಗಮ ಸಂಗೀತ ಹಾಗೂ ಜಾನಪದ ಗಾಯಕರಾದ ಶ್ರೀಮಾನ್ ವೈ. ಕೆ. ಮುದ್ದುಕೃಷ್ಣ. ಈ ಕಾರ್ಯಕ್ರಮದಲ್ಲಿ ಸುಮಾರು 700 ಕಲಾಭಿಮಾನಿ,



ನಂಗಾರು ಕುಟುಂಬಸ್ತರು ಪ್ರಾಯೋಜಿಸಿದ ಕೊಡಗು ಮತ್ತು ದ. ಕ. ಗೌಡ ಸಮಾಜದ ಸಾಂಸ್ಕೃತಿಕ ಸಂಜೆಯಲ್ಲಿ ಮುಖ್ಯ ಅತಿಥಿಗಳಾದ ಅಂಬರೀಷ, ವೈ. ಕೆ. ಮುದ್ದುಕೃಷ್ಣ, ಅಧ್ಯಕ್ಷರಾದ ಡಿ. ಎಸ್. ಆನಂದ, ಉಪಾಧ್ಯಕ್ಷರಾದ ತಿಮ್ಮಪ್ಪಗೌಡ, ಕಾರ್ಯದರ್ಶಿಗಳಾದ ದಿನಕರಗೌಡ.

ಕಲಾಪೋಷಕರು ನೆರೆದಿದ್ದುದ್ದು ಕಾರ್ಯಕ್ರಮ ಏರ್ಪಡಿಸಿದವರಿಗೆ ಹೆಚ್ಚಿನ ಸಂತೋಷವನ್ನುಂಟು ಮಾಡಿತ್ತು. ಈ ಸಾಂಸ್ಕೃತಿಕ ಸಂಜೆಯಲ್ಲಿ ಸೋಬಾನೆ, ಜನಪದ ಗೀತೆ, ಭಕ್ತಿ ಗೀತೆ, ಭಾವಗೀತೆ, ಚಲನಚಿತ್ರ ಗೀತೆಗಳನ್ನು ನಮ್ಮ ಬಂಧುಗಳು ಸುಶ್ರಾವ್ಯವಾಗಿ ಹಾಡಿ ವೀಕ್ಷಕರನ್ನು ಮನರಂಜಿಸಿದರು. ಇದರಲ್ಲಿ ವಿಶೇಷತೆಯೆಂದರೆ ಗಿನ್ನಿಸ್ಸ್ ದಾಖಲೆ ಮಾಡಿದ ಲಕ್ಷ್ಮಣ ಸುವರ್ಣರವರ ಹಿನ್ನೆಲೆ ಸಂಗೀತ ಹಾಗೂ ಕಲಾವಿದ ವೆಂಕಟೇಶ್‌ರವರ ಡಾ. ರಾಜಣ್ಣರವರ ಮಿಮಿಕ್ರಿ.ಅತ್ಯಾನಂದ ನೀಡಿದ ಕಾರ್ಯಕ್ರಮವೆಂದರೆ ಡಾ. ದೇವಿಪ್ರಸಾದ್ ಪೂರ್ವಸಿದ್ಧತೆ, ಅವರ ಮನೋಜ್ಞ ಅಭಿನಯ, ಹಿನ್ನೆಲೆ ಸಂಗೀತ ಜನರ ಮನಸ್ಸನ್ನು ಸೂರೆಗೊಂಡಿತು. ಇನ್ನೊಂದು ವಿಶೇಷ ಕಾರ್ಯಕ್ರಮವೆಂದರೆ ಬೆಂಗಳೂರಿನ ಗೌಡ ಮಹಿಳಾ ಒಕ್ಕೂಟದ ವತಿಯಿಂದ ಮಹಿಳೆಯರೇ ನಡೆಸಿಕೊಟ್ಟ "ಜ್ಯೋತಿಯ ನೃತ್ಯ" ಇದರೊಂದಿಗೆ ಭರತನಾಟ್ಯ, ಚಲನಚಿತ್ರ ನೃತ್ಯ ಏಕಪಾತ್ರಾಭಿನಯ, ಕಿರುನಾಟಕಗಳನ್ನು ಏರ್ಪಡಿಸಲಾಯಿತು.

ಈ ಸಾಂಸ್ಕೃತಿಕ ಸ್ಪರ್ಧೆ ರವೀಂದ್ರ ಕಲಾಕ್ಷೇತ್ರದಲ್ಲಿ ಅಚ್ಚುಗಟ್ಟಾಗಿನಡೆದದ್ದು ಒಂದು ಪ್ರಮುಖ ಘಟನೆಯೇ ಸರಿ. ಮನೋರಂಜನೆಯ ಜೊತೆಗೆ ಮನೋವಿಕಾಸ ಎಂಬುದು ಇದರ ಮುಖ್ಯ ಉದ್ದೇಶ ಹಾಗೂ ಈ ಕಾರ್ಯಕ್ರಮದ ಪ್ರಾಯೋಜಕರಾಗಿ ನಂಗಾರು ಕುಟುಂಬಸ್ಥರು ಮುಂದೆ ಬಂದು ನಡೆಸಿಕೊಟ್ಟಿದ್ದು ಕೂಡ ಬಾರಿ ಪ್ರಶಂಸೆಗೆ ಒಳಪಟ್ಟಿತು.

ಹೀಗೆ ಇನ್ನು ಮುಂದೆಯೂ ಕೂಡ ಬೆಂಗಳೂರಿನಲ್ಲಿರುವ ಹಲವಾರು ಕುಟುಂಬಗಳು ಮುಂದೆ ಬಂದು ಇಂಥಹ ಕಾರ್ಯಕ್ರಮಗಳನ್ನು ನಡೆಸಿಕೊಟ್ಟಲ್ಲಿ ಗೌಡ ಸಮಾಜ ಅಭಿವೃದ್ಧಿಯತ್ತ ಸಾಗುವುದರಲ್ಲಿ ಖಂಡಿತ ಸಂಶಯವಿರುವುದಿಲ್ಲ ಎಂಬುದು ನಮ್ಮ ಭಾವನೆ.

ಸಾಂಸ್ಕೃತಿಕ ಸಂಜೆಯ ನಂತರ ಈ ಸಮಾಜ ನಡೆಸಿಕೊಟ್ಟ ಇನ್ನೊಂದು ಸ್ಪರ್ಧೆಯೆಂದರೆ "Shuttle Badminton" H. M. T. ಒಳಾಂಗಣ ಕ್ರೀಡಾಂಗಣದಲ್ಲಿ ನಡೆದ ಈ ಸ್ಪರ್ಧೆಯಲ್ಲಿ ಸುಮಾರು 40 ತಂಡಗಳು ಭಾಗವಹಿಸಿದ್ದವು. ಕೊಡಗಿನಿಂದ ಬಹುದೂರ ಬೆಂಗಳೂರಿಗೆ ಬಂದ ಪೆರಿಯನ ಸುಮಿತ್ರ ಜಯನಂದ, ಪಿ. ಪಿ. ನವಿ ಹಾಗು ಪರ್ಲಕೋಟಿ ಗಿರೀಶ್ ಮತ್ತು ದಂಬೆಕೋಡಿ ಜಯಂತಿ ಪೂವಯ್ಯ ತಂಡದವರು ಪ್ರಶಸ್ತಿಯನ್ನು ಗೆದ್ದಿದ್ದು ಒಂದು ವಿಶೇಷವಾಗಿತ್ತು.

ಈ ಸಮಾಜದ ಅತ್ಯಂತ ಮುಖ್ಯ ಹಾಗು ಬಾರೀ ದೊಡ್ಡ ಕಾರ್ಯಕ್ರಮವೆಂದರೆ ತಾರೀಕು 16-9-2001ರಂದು ಸುಮಾರು 2000 ಜನರು ನೆರೆದಿದ್ದ ಮಹಾಸಭೆ ಹಾಗು ಕೈಲು ಮುಹೂರ್ತ ಸಮಾರಂಭ ಇದು ನಡೆದಿದ್ದು ಬೆಂಗಳೂರಿನ ವಸಂತನಗರದಲ್ಲಿರುವ ಜಸ್ಮಾ ಭವನದಲ್ಲಿ. ಈ ಕಾರ್ಯಕ್ರಮ ಎಸ್. ನಾರಾಯಣ್‌ರವರ ಪ್ರಾರ್ಥನೆಯೊಂದಿಗೆ ಪ್ರಾರಂಭವಾಯಿತು. ಶ್ರೀ ಪೂಜಾರೀರ ಪೂವಯ್ಯರವರು ಸಾಂಪ್ರದಾಯಿಕವಾಗಿ ಆಯುಧ ಪೂಜೆಯನ್ನು ನೆರವೇರಿಸಿಕೊಟ್ಟರು. ಅಧ್ಯಕ್ಷತೆಯನ್ನು ಸಮಾಜದ ಅಧ್ಯಕ್ಷರಾದ ಶ್ರೀಮಾನ್ ದಂಬೆಕೋಡಿ ಆನಂದ್‌ರವರು ವಹಿಸಿ, ಮುಖ್ಯ ಅತಿಥಿಗಳಾದ ಹಾಲಿ ಕೊಡಗು ಜಿಲ್ಲಾ ಪರಿಷತ್ತಿನ ಅಧ್ಯಕ್ಷೆಯಾದ ಶ್ರೀಮತಿ ಕೆ. ಪಿ. ಚಂದ್ರಕಲಾ ಹಾಗು ಪುತ್ತೂರಿನ ವಿಧಾನ ಸಭಾ ಶಾಸಕರು-ಹಾಗು ಹಾಲಿ ವಿಧಾನ ಸಭೆಯ ಉಪನಾಯಕರಾದ ಶ್ರೀಮಾನ್ ಸದಾನಂದ ಗೌಡರು



ಸಾಂಸ್ಕೃತಿಕ ಸಂಜೆಯ ಒಂದು ವಿಶೇಷತೆ - ಭೂತಕೋಲದಲ್ಲಿ ಡಾ. ದೇವಿಪ್ರಸಾದ್ ಮತ್ತು ಭಕ್ತರು

ಆದರೆ ಒಂದು ಅಡಿಕೆ ಮರ. ಹೋದರೆ ಒಂದು ಗೋಟಡಿಕೆ



ದಿನಾಂಕ 16-9-2001ರಲ್ಲಿ ವಾರ್ಷಿಕ ಮಹಾಸಭೆ ಮತ್ತು ಕೈಲು ಮುಹೂರ್ತ ಹಬ್ಬದ ಉದ್ಘಾಟನೆ ಮಾಡಿದ ಶ್ರೀಮತಿ ಚಂದ್ರಕಲಾ, ಶ್ರೀ ಸದಾನಂದಗೌಡ, ಎಂ.ಎಲ್.ಎ., ಪುತ್ತೂರು, ಮತ್ತು ಶ್ರೀ ದಂಬೇಕೋಡಿ ಆನಂದ, ಅಧ್ಯಕ್ಷರು ಹಾಗೂ ಐ.ಎ.ಎಸ್. ಅಧಿಕಾರಿ, ಕೋಳಿಬೈಲು ಬೆಳ್ಳಿಯಪ್ಪ

ಗಣ್ಯವ್ಯಕ್ತಿಗಳನ್ನು, ಬಂಧುಮಿತ್ರರನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿದರು. ಜ್ಯೋತಿ ಬೆಳಗಿಸುವುದರ ಮೂಲಕ ಸಮಾರಂಭವನ್ನು ಮುಖ್ಯ ಅತಿಥಿಗಳು ಉದ್ಘಾಟಿಸಿದ ನಂತರ 2000-01ರ ವರ್ಷದಲ್ಲಿ ನಮ್ಮನ್ನಗಲಿದ ಸಮಾಜ ಬಾಂಧವರ ಆತ್ಮಕ್ಕೆ ಶಾಂತಿ ಕೋರಲು ಒಂದು ನಿಮಿಷ ಮೌನ ಆಚರಿಸಲಾಯಿತು.

ಅನಂತರ ಹಾಲಿ ಕಾರ್ಯದರ್ಶಿಗಳಾದ ಶ್ರೀಮಾನ್ ದಿನಕರ ಗೌಡರು ಸಮಾಜದ 2000-01 ವರದಿಯನ್ನು ಸಭೆಗೆ ಓದಿ ಹೇಳಿದರು. ಈ ವರದಿಯ ನಂತರ ತಾವು ಈ ಸಮಾಜದ ಕಾರ್ಯದರ್ಶಿಯಾಗಿ 10 ವರ್ಷ ಸೇವೆ ಸಲ್ಲಿಸಿದ್ದು, ಈಗ ಮಂಗಳೂರಿಗೆ ವರ್ಗಾವಣೆ ಹೊಂದಿದ್ದರಿಂದ ಅನಿವಾರ್ಯವಾಗಿ ಕಾರ್ಯದರ್ಶಿ ಹುದ್ದೆಯನ್ನು ಬಿಡಬೇಕಾಗಿದೆ. ತಾನು ಈ ಹುದ್ದೆಯಲ್ಲಿರುವಾಗ ನನಗೆ ಸಂಪೂರ್ಣ ಸಹಕಾರ ನೀಡಿದಕ್ಕಾಗಿ ಅವರು ಬಂಧು-ಮಿತ್ರರನ್ನು ಅಭಿನಂದಿಸಿದರು. ತದನಂತರ ಸಮಾಜದ ಖಜಾಂಜಿಯಾದ ಶ್ರೀ ಬಿ. ಚಿನ್ನಪ್ಪ ಗೌಡರು 2000-01 ರ ಲೆಕ್ಕಪತ್ರವನ್ನೋದಿ ಸಭೆಗೆ ಹೇಳಿ ಅದರ ಅನುಮೋದನೆಯನ್ನು ಬಯಸಿದರು.

ಅನಂತರ ಗಣ್ಯವ್ಯಕ್ತಿಗಳಿಗೆ ಸನ್ಮಾನ ಮತ್ತು ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ ವಾಣಿಜ್ಯ ಇಲಾಖೆಯ ಅಪರ ಆಯುಕ್ತರಾಗಿ ಬಡ್ತಿ ಹೊಂದಿದ್ದ ಶ್ರೀ ಡಿ. ವಿ. ಶಿವರಾಮುರವರನ್ನು, ಒಬ್ಬ ಯಶಸ್ವಿ ವೈದ್ಯನೆಂದೆನಿಸಿಕೊಂಡ ನಂಬುಡಿ ಡಾ. ತಮ್ಮಯ್ಯರವರನ್ನು, ಪೋಲೀಸ್ ಇಲಾಖೆಯಲ್ಲಿ ಸರ್ಕಲ್ ಇನ್ಸ್‌ಪೆಕ್ಟರ್ ಆಗಿ ಕಾರ್ಯ ನಿರ್ವಹಿಸಿದ್ದು, ಇತ್ತೀಚೆಗೆ ಮುಖ್ಯಮಂತ್ರಿಯ ಬೆಳ್ಳಿಪದಕವನ್ನು ಪಡೆದ ಶ್ರೀ ಕೇಕಡ ನಾಣಯ್ಯರವರನ್ನು, ಕೃಷಿ ವಿಶ್ವವಿದ್ಯಾನಿಲಯದ ಚಿನ್ನದ ಪದಕ ವಿಜೇತ ಹಾಗು ಇತ್ತೀಚೆಗೆ ಡಾಕ್ಟರೇಟ್ ಪಡೆದ ಶ್ರೀಮಾನ್ ಕಾಯರ್‌ಮಾರ್ ಜಯಪ್ರಸಾದ್‌ರವರನ್ನು, ಕ್ರೀಡಾಕೂಟದಲ್ಲಿ ಕೋ-ಕೋ ಪಂದ್ಯದಲ್ಲಿ ಭಾರತವನ್ನು ಪ್ರತಿನಿಧಿಸಿ ಏಕಲವ್ಯ ಪ್ರಶಸ್ತಿ ವಿಜೇತ ಶ್ರೀ ಉಳುವಾರನ ದೀಪಕ್‌ರವರನ್ನು ಹಾಗು ಇಲ್ಲಿಯವರೆಗೂ ಸಮಾಜಕ್ಕೆ ತಮ್ಮ ಅನುಪಮ ಸೇವೆ ಸಲ್ಲಿಸಿದ ಶ್ರೀ ತಮ್ಮಪ್ಪಗೌಡರನ್ನು, ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ ಶ್ರೀಮಾನ್ ಅನಂತರಾಜು ಗೌಡರನ್ನು, ಕಾರ್ಯದರ್ಶಿ ಶ್ರೀ ದಿನಕರಗೌಡರನ್ನು ಕಿಕ್ಕಿರಿದು ತುಂಬಿದ ಸಭೆಯಲ್ಲಿ ಹಿರಿಯರು ಸಾಹಿತಿಗಳು ಆದ ಶ್ರೀಮಾನ್ ಪೂಜಾರಿ ಮೊಣ್ಣಪ್ಪನವರು, ಡಾ. ಸಿ. ಕೆ. ಆನಂದ್‌ರವರು, ಐ.ಎ.ಎಸ್. ಅಧಿಕಾರಿಯಾದ ಶ್ರೀ ಕೋಳಿಬೈಲು ಬೆಳ್ಳಪ್ಪರವರು ಹಾಗು ಮುಖ್ಯ ಅತಿಥಿಗಳಾದ ಚಂದ್ರಕಲಾ ಮತ್ತು ಶ್ರೀ ಸದಾನಂದ ಗೌಡರು ಶಾಲು ಹೊದಿಸಿ, ಫಲಪುಷ್ಪವಿತ್ತು ಗೌರವಿಸಿದರು.

ಪ್ರತಿಭಾ ಪುರಸ್ಕಾರ ಕಾರ್ಯಕ್ರಮದಲ್ಲಿ 2000-01ರ ಸಾಲಿನ ಪಿ.ಯು.ಸಿ.ಯಲ್ಲಿ ಅಧಿಕ ಅಂಕ ಪಡೆದ ಭರತ್ ವಿ. ಎನ್. (93%) ಅವರಿಗೆ ರೂ. 1000/-, ಯತಿನ್. ಎ. ಜಿ. (91%) ಅವರಿಗೆ ರೂ. 750/- ಅಕ್ಷತಾ ಬಿ. ವಿ. (89%)ರೂ. 500ರನ್ನು ಯು. ವಿ. ಭರತ್‌ರವರಿಗೆ (89%) ಪ್ರಶಸ್ತಿಯನ್ನು ಐ.ಎ.ಎಸ್. ಅಧಿಕಾರಿ ಕೋಳೀಬೈಲು ಬೆಳ್ಳಪ್ಪರವರು ಕೊಟ್ಟು ಸನ್ಮಾನಿಸಿದರು. ಈ ಬಹುಮಾನಗಳನ್ನು ವಾಣಿಜ್ಯ ಸಹಾಯಕ ಆಯುಕ್ತರಾದ ಶ್ರೀ ನಳಿನಾಕ್ಷ ಗೌಡರುತಮ್ಮ ಅಣ್ಣನವರಾದ ದಿವಂಗತ ಶ್ರೀ ಯದುಪತಿ ಗೌಡರ ಸವಿನೆನಪಿಗಾಗಿ ನೀಡಿದ್ದಾರೆ.

ಎಸ್. ಎಸ್. ಎಲ್. ಸಿ.ಯಲ್ಲಿ ಎಂ. ಎಸ್. ಅರುಣ್ (94%) ಇವರಿಗೆ ರೂ. ಒಂದು ಸಾವಿರ, ನಮ್ರತಾ ವಿ. ವಿ. (92%) ರೂ. 750/- ಹಾಗು ಎಂ. ಕೆ. ಶ್ರುತಿ (90%) ರೂ. 500ರನ್ನು ಹಾಗು ಪ್ರಶಸ್ತಿಯನ್ನು ಕೊಟ್ಟು ಸನ್ಮಾನಿಸಲಾಯಿತು.



ಬೆಂಗಳೂರಿನ ಗೌಡ ಮಹಿಳಾ ಒಕ್ಕೂಟ ತಂಡದವರಿಂದ ಜ್ಯೋತಿ ನೃತ್ಯ

ಶೇಕಡ 85% ಹೆಚ್ಚು ಅಂಕಗಳನ್ನು ಗಳಿಸಿದ ಪ್ರಿಯಾಂಕ, ಬೃಂದಾ ಗಣೇಶ್, ಧನಂಜಯ ಕೆ. ಕೆ., ಪ್ರತಿಮಾ ಕೆ. ಡಿ., ಅರ್ಚನಾ, ದಿವೀಶ್ ದಿನಕರಗೌಡ ಹಾಗು ಅವಿನಾಶ್‌ರವರಿಗೆ ಪ್ರಶಸ್ತಿಗಳನ್ನು ಕೊಡಲಾಯಿತು. ಇದನ್ನು ಶ್ರೀ ನಳಿನಾಕ್ಷಗೌಡರು ಅವರ ತಮ್ಮ ದಿವಂಗತ ಶ್ರೀ ಜಯರಾಂಗೌಡರ ಸವಿನೆನಪಿಗಾಗಿ ಕೊಟ್ಟಿರುತ್ತಾರೆ.

ಕಾರ್ಯನಿರ್ವಾಹಕರು ಜಂಟಿ ಕಾರ್ಯದರ್ಶಿಯು ಆದ ಶ್ರೀಮಾನ್ ನಂಗಾರು ನಿಂಗರಾಜುರವರು, ಮಹಿಳಾ ಸಮಾಜದ ಬಗ್ಗೆ ದೂರವಾಣಿ ಕೈಪಿಡಿಯ ಬಗ್ಗೆ ಹಾಗು ಹೊಸದಾಗಿ ಆರಂಭಿಸುತ್ತಿರುವ ಕೊಡಗು ಮತ್ತು ದಕ್ಷಿಣ ಗೌಡ ಸಮಾಜದ ಕ್ರೆಡಿಟ್ ಕೋಪರೇಟಿವ್ ಸೊಸೈಟಿಯ ಬಗ್ಗೆ, ಇನ್ನೂ ಇತರ ಹಲವಾರು ಪ್ರಕಟಣೆಗಳನ್ನು ನೀಡಿದರು. ಸಮಾಜದ ಹಿರಿಯರಾದ ಹಾಗು ಗೌಡ ಜನಾಂಗದ ಭೀಷ್ಮರೆನಿಸಿಕೊಂಡ ಶ್ರೀಮಾನ್ ಪೂಜಾರಿರ ಮೊಣ್ಣಪ್ಪರವರು ನಮ್ಮ ಸಮಾಜ ಹೊಸದಾಗಿ ಖರೀದಿಸಿದ ಬೆಂಗಳೂರಿನ ಪೀಣ್ಯದಲ್ಲಿ ಸುಮಾರು 12,000

ಆಷಾಢದ ಗಾಳಿ ಬೀಸಿ ಬೀಸಿ ಬಡಿದಾಗ, ಹೇಸಿ ನನ್ನ ಜೀವ ಹೆಂಗೆ ಸಾಗಿದೆ ಎಂದಿತು.

ಅಡಿಗಳ ವಿಸ್ತಾರದ ನಿವೇಶನವನ್ನು ಸುಮಾರು ರೂ. 18ಲಕ್ಷಕ್ಕೆ ಖರೀದಿಸಿದ್ದು, ಇದಕ್ಕೆ ಸಹಾಯಾರ್ಥವಾಗಿ ಪ್ರತಿಯೊಂದು ಕುಟುಂಬವು ರೂ. 500ರನ್ನು ಕೊಟ್ಟು ಸಹಕರಿಸಬೇಕೆಂದು ಕೇಳಿಕೊಂಡರು. ಮುಖ್ಯ ಅತಿಥಿಗಳಲ್ಲೊಬ್ಬರಾದ ಶ್ರೀಮತಿ ಚಂದ್ರಕಲಾರವರು ಮಾತಾಡುತ್ತಾ ಈ ಸುಂದರ ಸಮಾರಂಭದ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸಿದರಲ್ಲದೆ ಕಾವ್ಯಮಯವಾಗಿ ಮಾತನಾಡುತ್ತಾ "ಗೌಡರು ಇಲ್ಲದ ನಾಡು, ಹಸಿರು ಇಲ್ಲದ ಬೆಂಗಾಡು" ಎಂದು ಹೇಳಿ ಗೌಡರ ಪ್ರಾಮುಖ್ಯತೆಯನ್ನು ಒತ್ತಿ ಹೇಳಿದರಲ್ಲದೆ ರಾಜಕೀಯವಾಗಿ, ಸಾಮಾಜಿಕವಾಗಿ ಗೌಡರೆಲ್ಲ ಒಗ್ಗೂಡಬೇಕೆಂದು ಕಳಕಳಿಯ ಮನವಿಯನ್ನು ಮಾಡಿದರು. ಕಳೆದ ವಿಧಾನಸಭಾ ಚುನಾವಣೆಯಲ್ಲಿ ಸೋಮವಾರಪೇಟೆ ಕ್ಷೇತ್ರದಲ್ಲಿ ಅವರು ಮತ್ತು ಜೀವಿಜಯ ಸ್ಪರ್ಧಿಸಿದರಿಂದ ಮೂರನೆಯವರು ಲಾಭ ಪಡೆದರು. ಮಡಿಕೇರಿ ಕ್ಷೇತ್ರದಲ್ಲಿ ದಂಬೆಕೋಡಿ ಮಾದಪ್ಪರವರು ಮತ್ತು ಕೊಂಬಾರನ ಬೋಪಯ್ಯರವರು ಚುನಾವಣೆಯಲ್ಲಿ ಸ್ಪರ್ಧಿಸಿದ್ದರಿಂದ ಮತ್ತೊಬ್ಬರು ಲಾಭ ಪಡೆದುಕೊಂಡರು. ಹೀಗಾಗದಂತೆ ನಾವು ಮುಂದೆ ಖಂಡಿತ ಎಚ್ಚರಿಕೆ ವಹಿಸಬೇಕು ಎಂದು ಜನತೆಯಲ್ಲಿ ಮನವಿ ಮಾಡಿದರು.

ಇನ್ನೊಬ್ಬ ಮುಖ್ಯ ಅತಿಥಿಯಾದ ವಿಧಾನಸಭೆ ಉಪಾಧ್ಯಕ್ಷ ಸದಾನಂದಗೌಡರು ತಮ್ಮ ಮಾತುಗಳ ಶೈಲಿಯಿಂದ ಜನತೆಗೆ



ವಾರ್ಷಿಕ ಮಹಾಸಭೆಯಲ್ಲಿರುವ ಮುಖ್ಯ ಅತಿಥಿಗಳು ಹಾಗೂ ಪದಾಧಿಕಾರಿಗಳು

ರಸದೌತಣವನ್ನು ನೀಡಿದ್ದರಲ್ಲದೆ, ತಾನು ಹುಟ್ಟಿ ಬೆಳೆದು ಬಂದ ಸಮಾಜದ ಪ್ರಾಮುಖ್ಯತೆಯನ್ನು ಹೇಳುತ್ತಾ ನಮ್ಮ ಸಮಾಜದ ಏಳಿಗೆಗಾಗಿ ಪ್ರತಿಯೊಬ್ಬನೂ ದುಡಿಯಬೇಕೆಂದು ಗೌಡ ಜನತೆಯಲ್ಲಿ ಮನವಿ ಮಾಡಿಕೊಂಡರು. ಕಾವೇರಿ ಜಲವಿವಾದ ವಿಷಯದಲ್ಲಿ ಪ್ರಧಾನಮಂತ್ರಿಗಳನ್ನು ಭೇಟಿ ಮಾಡಲು ಮುಖ್ಯ ಮಂತ್ರಿಯ ಜೊತೆಗೆ ಹೋಗಿದ್ದರೂ ನಾನು ಹೃದಯಪೂರ್ವಕವಾಗಿ ಬಿಚ್ಚು ಮನಸ್ಸಿನಿಂದ ಎಷ್ಟೇ ಕಷ್ಟ ಇದ್ದರೂ ಸಮಾಜ ಬಾಂಧವರ ಆಹ್ವಾನಕ್ಕೆ ಸ್ಪಂದಿಸಿ ಹಾಜರಾಗುತ್ತಿರುವುದಾಗಿ ತಿಳಿಸಿದರು.

ಶ್ರೀಮಾನ್ ತೆಕ್ಕಡೆ ಕಾವೇರಿಯಪ್ಪರವರು ದಿಸೆಂಬರ್ ಎರಡನೇ ವಾರ ಸಮಾಜವು ನಡೆಸಲು ಉದ್ದೇಶಿಸಿರುವ ವಧು-ವರರ ಮುಖಾ-ಮುಖಿಯ ಬಗ್ಗೆ ಪ್ರಕಟಿಸಿದರು. ಅಧ್ಯಕ್ಷ



ಪ್ರತಿಭಾ ಪುರಸ್ಕಾರ - ರ್‍ಯಾಂಕ್ ವಿಜೇತರಿಗೆ ಸನ್ಮಾನ

ಭಾಷಣದಲ್ಲಿ ಶ್ರೀಮಾನ್ ದಂಬೆಕೋಡಿ ಆನಂದ್‌ರವರು ಈ ಸಮಾಜದ ಕಾರ್ಯಕ್ರಮಗಳನ್ನು ಮೆಲುಕು ಹಾಕಿದ್ದಲ್ಲದೆ ತಮ್ಮ ಮುಂದಿನ ಕಾರ್ಯಕ್ರಮದ ಯೋಜನೆಗಳನ್ನು ಜನರ ಮುಂದಿಟ್ಟರು. ತಾವು ಮಾಡುತ್ತಿರುವ ಕಾರ್ಯಕ್ರಮದಲ್ಲಿ ಜನರು ಸ್ಪಂದಿಸಿದಕ್ಕಾಗಿ ಅತೀವ ಸಂತೋಷವನ್ನು ಹರ್ಷವನ್ನು ವ್ಯಕ್ತಪಡಿಸಿದರು.

ಭೋಜನದ ನಂತರ ಕ್ರೀಡಾ ಮತ್ತು ಸಾಂಸ್ಕೃತಿಕ ಚಟುವಟಿಕೆಯಲ್ಲಿ ವಿಜೇತರಿಗೆ ಪ್ರಶಸ್ತಿಯನ್ನು ಕೊಡಲಾಯಿತು. ಕಟ್ಟಡ ನಿಧಿಗಾಗಿ ಬಹುಮಾನ ಯೋಜನೆಯ 'ಡ್ರಾ'ವನ್ನು ಅಂದು ಎತ್ತಲಾಯಿತು. ಸಮಾಜದ ಉಪಾಧ್ಯಕ್ಷರಾದ ಶ್ರೀಮಾನ್ ತಮ್ಮಪ್ಪ ಗೌಡರ ವಂದನಾರ್ಪಣೆಯೊಂದಿಗೆ ಸಭೆ ಮುಕ್ತಾಯವಾಯಿತು.

ಕಾರ್ಯಕಾರಿ ಮಂಡಳಿಯ ಚುನಾವಣೆ ನಡೆದು ಈ ಕೆಳಗಿನ ಸದಸ್ಯರು ಅವಿರೋಧವಾಗಿ ಆಯ್ಕೆಯಾಗಿದ್ದಾರೆ. ಅವರುಗಳೆಂದರೇ ಶ್ರೀ ದಂಬೆಕೋಡಿ ಆನಂದ, ಶ್ರೀ ಟಿ. ತಿಮ್ಮಪ್ಪಗೌಡ, ಶ್ರೀ ಕುರಿಯಾರ ಚಾಮಯ್ಯ, ಶ್ರೀ ಪೂಜಾರಿ ಪೂವಯ್ಯ, ಶ್ರೀ ಅಮೈ ಸೀತಾರಾಂ, ಶ್ರೀ ಹೊದ್ದೆಟ್ಟಿ ಭವಾನಿಶಂಕರ್, ಶ್ರೀ ಅಡ್ಕಾರು ಹೂವಪ್ಪಗೌಡ, ಶ್ರೀ ಬೊಳ್ಳೂಣ ಸಾಂತಪ್ಪ ಗೌಡ, ಶ್ರೀ ಕೊಟೇರ ಪೊನ್ನಪ್ಪ, ಶ್ರೀ ಕನ್ನಡ್ಕ ಗಂಗಾಧರ ಗೌಡ, ಶ್ರೀ ಕೇವಳ ರವೀಂದ್ರನಾಥ್, ಶ್ರೀ ಪಾಣತ್ತಲೆ ಕುಶಾಲಪ್ಪ, ಶ್ರೀ ಕೊಡೆಕಲ್ಲು ನಾರಾಯಣಗೌಡ, ಶ್ರೀ ಎಂ. ಕೆ. ಗೌಡ, ಶ್ರೀ ಕೆ. ಎಂ. ವಿಠ್ಠಲಗೌಡ, ಶ್ರೀ ಶಿರಗಜೆ ಪೊನ್ನಪ್ಪ, ಶ್ರೀ ಹೊಸೋಕ್ಲು ಪದ್ಮನಾಭ, ಶ್ರೀ ಕೆ. ಗಿರಿಯಪ್ಪ, ಶ್ರೀ ಮೊಟ್ಟೇರ ಕುಶಾಲಪ್ಪ, ಶ್ರೀ ಅಮ್ಮಾಜೀರ ಪೊನ್ನಪ್ಪ, ಶ್ರೀ ಕೇವಳ ಶಿವರಾಂ, ಶ್ರೀ ತೆಕ್ಕಡೆ ಕಾವೇರಿಯಪ್ಪ, ಶ್ರೀ ಅಮೈ ತಿಲಕ್, ಶ್ರೀಮತಿ ಮೂಲೆಮಜಲು ಯಶೋಧಮ್ಮ, ಚಿನ್ನಪ್ಪ, ಶ್ರೀಮತಿ ಸುಳ್ಯಕೋಡಿ ವೈಶಾಲಿ ಅಮರನಾಥ್, ಶ್ರೀ ಮಾಣಿಬೆಟ್ಟು ಭೋಜಪ್ಪ, ಶ್ರೀ ಕಲ್ಲುಮುಟ್ಲು ಬಸಪ್ಪ ಹಾಗು ಶ್ರೀ ತೇನನ ರಾಜೇಶ್. ಇದರಲ್ಲಿ ಕಾರ್ಯಕಾರಿ ಮಂಡಳಿಯ ಪದಾಧಿಕಾರಿಗಳಲ್ಲಿ ಅಧ್ಯಕ್ಷರಾಗಿ ಶ್ರೀಮಾನ್ ದಂಬೆಕೋಡಿ ಆನಂದರು, ಉಪಾಧ್ಯಕ್ಷರಾಗಿ ಶ್ರೀ ತಿಮ್ಮಪ್ಪಗೌಡರು ಪುನರ್ ಆಯ್ಕೆಯಾದರೆ, ಶ್ರೀಮಾನ್ ನಂಗಾರು ನಿಂಗರಾಜು ಕಾರ್ಯದರ್ಶಿಯಾಗಿ ಹಾಗು ಶ್ರೀ ಕೇವಳ ರವೀಂದ್ರನಾಥ್‌ರು ಖಜಾಂಜಿಯಾಗಿ ಆಯ್ಕೆಯಾಗಿದ್ದಾರೆ.

ಮಹಿಳಾ ಸಮಾಜದ ಅಧ್ಯಕ್ಷೆಯಾಗಿ ಶ್ರೀಮತಿ ಕುಯ್ಯಮುಡಿ

18ನೇ ಪುಟಕ್ಕೆ

# ಮರಗೋಡು : ಗೌಡ ಸಮಾಜದ 5ನೇ ವರ್ಷದ ಕೈಲು ಮುಹೂರ್ತ ಆಚರಣೆ

ಮೇಲ್ಕಂಡ ಸಮಾಜದ ಆಶ್ರಯದಲ್ಲಿ 5ನೇ ವರ್ಷದ ಕೈಲು ಮುಹೂರ್ತ ಆಚರಣೆಯ ಪ್ರಯುಕ್ತ ಸಂತೋಷಕೂಟವನ್ನು ಏರ್ಪಡಿಸಲಾಗಿತ್ತು. ದಿನಾಂಕ 7-10-2001ನೇ ಭಾನುವಾರ ಪೂರ್ವಾಹ್ನ 9-30 ಗಂಟೆಗೆಸಮಾಜದ ಅಧ್ಯಕ್ಷರಾದ ಶ್ರೀಬೈಮನ ಆರ್. ಪೊನ್ನಪ್ಪನವರಿಂದ ಸಾಂಪ್ರದಾಯಿಕವಾಗಿ ನೇಗಿಲು-ನೊಗ-ಕತ್ತಿ-ಕೋವಿಗೆ ಪೂಜೆ ಸಲ್ಲಿಸುವುದರೊಂದಿಗೆ, ತೆಂಗಿಕಾಯಿಗೆ ಗುಂಡು ಹಾರಿಸಿ ಸಮಾರಂಭವನ್ನು ಉದ್ಘಾಟಿಸಿದರು.

ಸಮಾರಂಭಕ್ಕೆ ಮುಖ್ಯ ಅತಿಥಿಗಳಾಗಿ ಆಗಮಿಸಿದ ಕರ್ನಾಟಕ ಸರಾಕಾರದ ಪೋಲಿಸ್ ಇಲಾಖೆಯ ವೃತ್ತ ನಿರೀಕ್ಷಕರಾದ ಶ್ರೀ ಚೆರಿಯಮನೆ ಕೆ. ಶಶೀಧರ ನವರು ಮಾತನಾಡುತ್ತಾ ಇಂಥಹ ಸಮಾರಂಭಗಳು ಜನಾಂಗದ ಒಗ್ಗಟ್ಟು, ಪರಸ್ಪರ ವಿಚಾರ ವಿನಿಮಯ, ನೋವು ನಲಿವುಗಳ ಹಂಚಿಕೆಗೆ ವೇದಿಕೆಯಾಗುತ್ತದೆ. ಅಲ್ಲದೆ ಎಲ್ಲಾ ಕಡೆ ನಿರಂತರವಾಗಿ ನಡೆಯುವಂತಾಗಲಿ ಎಂದು ಹಾರೈಸಿದರು. ಮತ್ತೋರ್ವ ಅತಿಥಿ ಮೈಸೂರಿನ ಮಾನಸಗಂಗೋತ್ರಿಯ ಉಪನ್ಯಾಸಕಿ ಕು. ಡಾ. ಬಡುವಂಡ್ರ ಆಶಾ ಪೂವಯ್ಯನವರು ಮಾತನಾಡುತ್ತಾ ಇಂತಹ ಸಮಾರಂಭಗಳು ಕೇವಲ ಒಂದೇ ದೃಷ್ಠಿಯಲ್ಲಿ ಸೀಮಿತವಾಗದೆ, ನಮ್ಮ ಜನಾಂಗದ ಭಾಷೆ, ಸಂಸ್ಕೃತಿ, ಆಚಾರ-ವಿಚಾರ, ಕ್ರೀಡೆ, ಕಲೆ, ಸಾಹಿತ್ಯ ಹಾಗು ಇನ್ನಿತರ ವಿಷಯಗಳಿಗೂ ವಿಸ್ತರಿಸುಮಂತಾಗಬೇಕು ಎಂದು ಜನಾಂಗಕ್ಕೆ ಕರೆಕೊಟ್ಟರು. ಜನಾಂಗದ ಹಿರಿಯರುಗಳಾದ ಶ್ರೀಯುತ ಕೊಂಪುಳೀರ ಆನಂದ ಮತ್ತು ಶ್ರೀಯುತ ಬಳಪದ ಸೋಮಣ್ಣನವರು ಸಂದರ್ಭಕನುಸಾರವಾಗಿ ಸಭೆಯಲ್ಲಿ ಮಾತನಾಡಿದರು.

ಶ್ರೀಯುತ ಕೊಂಪುಳೀರ ಆನಂದ, ನಿವೃತ್ತ ಸಹ-ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರಕಾರ, ಇವರು ತಮ್ಮ ಧರ್ಮ-ಪತ್ನಿ ದಿವಂಗತ ಗಂಗಮ್ಮನವರ ಸವಿನೆನಪಿಗಾಗಿ, ಮರಗೋಡು ಪದವಿಪೂರ್ವ ಕಾಲೇಜಿನಲ್ಲಿ 2ನೇ ವರ್ಷದ ಪಿ.ಯು.ಸಿ. ಅಂತಿಮ ವರ್ಷದ ಪರೀಕ್ಷೆಯಲ್ಲಿ ಗರಿಷ್ಠ ಅಂಕಗಳನ್ನು ಪಡೆದು ತೇರ್ಗಡೆಯಾದ ಜನಾಂಗದ ವಿದ್ಯಾರ್ಥಿನಿ ಕು. ಬಿದ್ರುಪಣೆ ಪೂರ್ಣಿಮಾ ಬಿದ್ದಪನವರಿಗೆ ಶಿಷ್ಯವೇತನವನ್ನು ವಿತರಿಸಿದರು. ಇದರಿಂದ ಉತ್ತೇಜಿತರಾದ ಶ್ರೀ ಬಳಪದ ಸೋಮಣ್ಣನವರು ಮುಂದಿನ ವರ್ಷದಿಂದ ಮರಗೋಡು ಪದವಿಪೂರ್ವ ಕಾಲೇಜಿನಲ್ಲಿ 2ನೇ ವರ್ಷದ ಪಿ.ಯು.ಸಿ. ಅಂತಿಮ ಪರೀಕ್ಷೆಯಲ್ಲಿ ವಿಜ್ಞಾನ ವಿಭಾಗದಲ್ಲಿ ಗರಿಷ್ಠ ಅಂಕಗಳನ್ನು ಪಡೆದು ತೇರ್ಗಡೆಯಾಗುವ ಜನಾಂಗದ ಪುರುಷ ವಿದ್ಯಾರ್ಥಿಗೆ ಶಿಷ್ಯವೇತನ ನೀಡುವುದಾಗಿ ಘೋಷಿಸಿದರು. ಸಮಾರಂಭದ ಮುಖ್ಯ ಅತಿಥಿಗಳಾದ ಶ್ರೀ ಚೆರಿಯಮನೆ ಕೆ. ಶಶೀಧರನವರು ಸಮಾಜಕ್ಕೆ ಉದಾರವಾಗಿ ಧ್ವನಿವರ್ಧಕವನ್ನು ನೀಡುವುದಾಗಿ ಘೋಷಿಸಿದರು. ಸಭಾಧ್ಯಕ್ಷರಾದ ಶ್ರೀ ಬೈಮನ ಪೊನ್ನಪ್ಪನವರು ಲಘು-ಕ್ರೀಡಾಕಾರ್ಯ ಕ್ರಮದ ವಿಜೇತರಿಗೆ ಬಹುಮಾನ ವಿತರಿಸಿ ಮಾತನಾಡುತ್ತಾ ನಿಮ್ಮೆಲ್ಲರ ಸಹಕಾರದಿಂದ ಹತ್ತು ವರ್ಷಗಳ ಹಿಂದೆಯೇ ಈ ಸಮಾಜ ಸ್ಥಾಪನೆಯಾದರು, ಸಮಾಜದಕೆಲಸ ಕಾರ್ಯಗಳು ಬಹಳಷ್ಟು ಅಪೂರ್ಣಗೊಂಡಿವೆ. ಮಾನ್ಯ ಸದಸ್ಯರು, ಜನಾಂಗ ಬಂಧುಗಳು ಸಮಾಜಕ್ಕೆ ತಮ್ಮ ತನು-ಮನ-ಧನದೊಂದಿಗೆ ಸಹಕರಿಸಿ ಕೈಜೋಡಿಸುವಂತೆ ಸಭೆಯಲ್ಲಿ ತಮ್ಮ ಕಳಕಳಿಯ ಮನವಿ ಮಾಡಿದರು.

ಸಭೆಯ ಪ್ರಾರಂಭದಲ್ಲಿ ಕುಮಾರಿಯರಾದ ಬಡುವಂಡ್ರ ನಂದಿನಿ ಮತ್ತು ಶಾಲಿನಿ ಸಹೋದರಿಯರಿಂದ ಪ್ರಾರ್ಥನೆ ಮಾಡಲಾಯ್ತು. ಆಡಳಿತ ಮಂಡಳಿಯ ಸದಸ್ಯರಾದ ಶ್ರೀ ಪುಳಕಂಡ ಮುತ್ತಪ್ಪನವರು ಸರ್ವರನ್ನು ಸ್ವಾಗತಿಸಿದರು. ಗೌರವ ಕಾರ್ಯದರ್ಶಿ ಶ್ರೀ ಜೈನೀರ ವೆಂಕಟೇಶನವರು ಕಾರ್ಯಕ್ರಮ ನಿರೂಪಿಸಿದರೆ, ಜಂಟಿ ಕಾರ್ಯದರ್ಶಿ ಶ್ರೀ ಕಟ್ಟೆಮನೆ ಜನಾರ್ಧನರವರು ಸರ್ವರನ್ನು ವಂದಿಸಿದರು. ಕೊನೆಯಲ್ಲಿ ಸಾಂಪ್ರದಾಯಿಕ ಊಟದ ಏರ್ಪಾಡು ಮಾಡಲಾಗಿತ್ತು.

ವರದಿ : **ಜೈನೀರ ವೆಂಕಟೇಶ್**

ಗೌ. ಕಾರ್ಯದರ್ಶಿ, ಗೌಡ ಸಮಾಜ (ರಿ) ಮರಗೋಡು

## ಗುಡ್ಡಗಾಡು ಓಟದಲ್ಲಿ ಅರಳುತ್ತಿರುವ ಪ್ರತಿಭೆ



ಮಡಿಕೇರಿ ಫೀಲ್ಡ್ ಮಾರ್ಷಲ್ ಕಾರ್ಯಪ್ಪ ಕಾಲೇಜಿನ ಪ್ರಥಮ ಬಿ. ಎ. ವಿದ್ಯಾರ್ಥಿ **ಕೋಚನ ತೇಜಸ್** ಇವರು ಇತ್ತೀಚೆಗೆ ಸ್ವಾತಂತ್ರ್ಯ ದಿನಾಚರಣೆಯ ಅಂಗವಾಗಿ ಮಡಿಕೇರಿಯಿಂದ ಕ್ಯಾಪಿಟಲ್ ವಿಲೇಜ್‌ನವರೆಗಿನ 10 ಮೈಲಿಗಳ ಓಟದಲ್ಲಿ ಪ್ರಥಮ ಸ್ಥಾನವನ್ನು ಗಳಿಸಿರುತ್ತಾರೆ. ಹಾಗೂ 3 ಬಾರಿ ರಾಜ್ಯಮಟ್ಟವನ್ನು ಪ್ರತಿನಿಧಿಸಿ ಸಾಧನೆ ಗೈದಿದ್ದಾರೆ.

2001-2002ರ ಮಂಗಳೂರು ವಿಶ್ವವಿದ್ಯಾನಿಲಯದ ಗುಡ್ಡಗಾಡು ಓಟದ ಸ್ಪರ್ಧೆಯ ಆಯ್ಕೆಯು ಸುಬ್ರಹ್ಮಣ್ಯದಲ್ಲಿ 12½ ಮೈಲಿಗಳ ಸ್ಪರ್ಧೆ ನಡೆಯಿತು. ಇದರಲ್ಲಿ ದ್ವಿತೀಯ ಸ್ಥಾನವನ್ನು ಗಳಿಸಿ ರಾಷ್ಟ್ರಮಟ್ಟಕ್ಕೆ ಆಯ್ಕೆಯಾಗಿದ್ದಾರೆ. ಮುಂದೆ ಇವರು ಹರಿಯಾಣದ ಕುರುಕ್ಷೇತ್ರ ವಿಶ್ವವಿದ್ಯಾನಿಲಯದಲ್ಲಿ ನಡೆಯುವ ಸ್ಪರ್ಧೆಗೆ ತೆರಳಲಿದ್ದಾರೆ. ಕಾಲೇಜಿಗೆ ಕೀರ್ತಿಯನ್ನು ತಂದಿರುವ ಇವರು ಗಾಳಿಬೀಡುವಿನ ಕೋಚನ ಬಸಪ್ಪ ಹಾಗು ದಿ. ಕುಕ್ಕುನೂರು ವಿಮಲ ದಂಪತಿಗಳ ಪುತ್ರರಾಗಿರುತ್ತಾರೆ.

ವರದಿ : **ಕೋಳಿಮುಡಿಯನ ಮಿಲನ್,**

ಗಾಳಿಬೀಡು.

# ಕೊಡಗಿನ ಹೆಗ್ಗಳಿಕೆಯ ಪತ್ರಿಕಾ ಭವನ ನಾಡಿಗೆ ಸಮರ್ಪಿತ



ಕೊಡಗು ಪತ್ರಿಕಾ ಭವನ ಟ್ರಸ್ಟ್ ಆಶ್ರಯದಲ್ಲಿ ಅಂದಾಜು ೧೭ ಲಕ್ಷ ರೂ. ವೆಚ್ಚದಲ್ಲಿ ನಿರ್ಮಿಸಲಾಗಿರುವ ಕೊಡಗು ಪತ್ರಿಕಾ ಭವನವು 15-10-2001ರಲ್ಲಿ ನಡೆದ ವರ್ಣರಂಜಿತ ಸಮಾರಂಭದಲ್ಲಿ ನಾಡಿಗೆ ಸಮರ್ಪಣೆಗೊಂಡಿತು.

ಭವನವನ್ನು ರಾಜ್ಯ ವಾರ್ತಾಸಚಿವ ಎಂ. ಶಿವಣ್ಣ ಅವರು ಉದ್ಘಾಟಿಸಿ ಮಾತನಾಡಿ, ಪತ್ರಕರ್ತರ ಮೇಲಿನ ದೌರ್ಜನ್ಯಗಳ ಕುರಿತು ವಿಚಾರಣೆ ನಡೆಸುವ ನಿಟ್ಟಿನಲ್ಲಿ ರಾಜ್ಯ ಮಟ್ಟದ ದೌರ್ಜನ್ಯ ಪರಿಶೀಲನಾ ಸಮಿತಿಯೊಂದನ್ನು ರಚಿಸುವ ಬಗ್ಗೆ ರಾಜ್ಯ ಸರ್ಕಾರ ಚಿಂತನೆ ನಡೆಸಿದೆ ಎಂದು ಹೇಳಿದರಲ್ಲದೇ, ಮಾಧ್ಯಮಗಳು ಸರ್ಕಾರ ಮತ್ತು ಜನರ ನಡುವಿನ ಸಂಪರ್ಕ ಸೇತುವೆಗಳಾಗಿ ಕಾರ್ಯ ನಿರ್ವಹಿಸಬೇಕೆಂದು ಸಲಹೆಯಿತ್ತರು.

ಪತ್ರಕರ್ತರ ಮೇಲಿನ ದೌರ್ಜನ್ಯಗಳ ಬಗ್ಗೆ ವಿಚಾರಣೆ ನಡೆಸಲು ಈಗಾಗಲೇ ಜಿಲ್ಲಾಧಿಕಾರಿಗಳ ನೇತೃತ್ವದಲ್ಲಿ ಜಿಲ್ಲಾ ಮಟ್ಟದ ಸಮಿತಿಗಳಿದ್ದು, ಅದೇ ಮಾದರಿಯಲ್ಲಿ ರಾಜ್ಯ ಮಟ್ಟದ ಸಮಿತಿ ರಚಿಸುವ ಕುರಿತು ಪರಿಶೀಲನೆ ನಡೆದಿದೆ ಎಂದರು.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪತ್ರಿಕೆಗಳ ಪಾತ್ರ ಮುಖ್ಯವಾಗಿದ್ದು, ಜನರ ಸಮಸ್ಯೆಗಳನ್ನು ಎತ್ತಿ ಹಿಡಿಯುವುದರೊಟ್ಟಿಗೆ ಅವುಗಳ ಪರಿಹಾರಕ್ಕಾಗಿ ಸರ್ಕಾರದ ಕಣ್ಣು ತೆರೆಸುವ ಕಾರ್ಯವನ್ನು ನಿರ್ವಹಿಸಬೇಕೆಂದ ಅವರು, ರಾಜ್ಯ ರಾಷ್ಟ್ರದ ಹಿತದೃಷ್ಟಿಯನ್ನು ಗಮನದಲ್ಲಿರಿಸಿಕೊಂಡು ವರದಿಗಳನ್ನು ಪ್ರಕಟಿಸುವ ಹೊಣೆ ಪತ್ರಕರ್ತರ ಮೇಲಿದೆ ಎಂದು ಅಭಿಪ್ರಾಯಪಟ್ಟರು.

ದೊಡ್ಡ ಮತ್ತು ಸಣ್ಣ ಪತ್ರಿಕೆಗಳ ನಡುವಿರುವ ಕಂದಕವನ್ನು ಸರಿದೂಗಿಸುವ ನಿಟ್ಟಿನಲ್ಲಿ ಸರ್ಕಾರ ಸಣ್ಣ ಪತ್ರಿಕೆಗಳನ್ನು ಪ್ರೋತ್ಸಾಹಿಸಲು ಕ್ರಮಕೈಗೊಳ್ಳುತ್ತಿದೆ ಎಂದ ಅವರು, ಪತ್ರಕರ್ತರ ಬೇಡಿಕೆಗಳನ್ನಾಧಾರಿಸಿ ಪಿ. ರಾಮಯ್ಯ ಸಮಿತಿಯ ಶೇ.೭೦ರಷ್ಟು ಶಿಫಾರಸ್ಸುಗಳನ್ನುಸರ್ಕಾರ ಈಗಾಗಲೇ ಅನುಷ್ಠಾನಗೊಳಿಸಿದ್ದು, ತಾಲ್ಲೂಕು ಮಟ್ಟದ ಪತ್ರಕರ್ತರಿಗೆ ಬಸ್ ಪಾಸ್ ಹಂಚಿಕೆ ವಿಷಯಕ್ಕೆ ಸಂಬಂಧಿಸಿದಂತೆ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರೊಂದಿಗೆ ಚರ್ಚಿಸುವ ಭರವಸೆಯಿತ್ತರು.

ಪತ್ರಕರ್ತರು ವಾಸ್ತವಿಕ ನೆಲೆಗಟ್ಟಿನಡಿ ಸುದ್ದಿಗಳನ್ನು ಪ್ರಕಟಿಸುವುದರೊಟ್ಟಿಗೆ ಸತ್ಯವನ್ನು ಎತ್ತಿ ಹಿಡಿಯಬೇಕೆಂದು ಸಲಹೆಯಿತ್ತ ಸಚಿವ ಶಿವಣ್ಣ ಅವರು, ಕೊಡಗು ಜಿಲ್ಲೆ ರಾಷ್ಟ್ರ ಭಕ್ತರ ಶಿಸ್ತಿನ, ದೇಶಾಭಿಮಾನಿಗಳ ನಾಡಾಗಿದೆ. ಈ ಹಿನ್ನೆಲೆಯಲ್ಲಿ ಈ ಜನಕ್ಕೆ ರಾಷ್ಟ್ರದಲ್ಲಿಯೇ ವಿಶೇಷ ಸ್ಥಾನವಿದೆ ಎಂದ ಅವರು ಕೊಡಗು ಪತ್ರಿಕಾಭವನ ನಾಗರೀಕರ ಸಮಸ್ಯೆಗಳನ್ನು ಪ್ರತಿಬಿಂಬಿಸುವ ಕೇಂದ್ರವಾಗಲಿ ಎಂದು ಹಾರೈಸಿದರು.

ಪತ್ರಿಕಾ ಭವನ ಟ್ರಸ್ಟ್ ಕಛೇರಿಯನ್ನುಉದ್ಘಾಟಿಸಿದ ಶಾಸಕ ಎಂ. ಪಿ. ಅಪ್ಪಚ್ಚು ರಂಜನ್ ಮಾತನಾಡಿ, ಪತ್ರಕರ್ತರು ಸತ್ಯ ನ್ಯಾಯಕ್ಕಾಗಿ ಹೋರಾಟ ಮಾಡಿ ಸದೃಢ ಸಮಾಜ ನಿರ್ಮಾಣಕ್ಕೆ ಪ್ರಯತ್ನಿಸಬೇಕೆಂದು ಕಿವಿಮಾತು ಹೇಳಿದರು.

ಯೋಜನೆ ಮತ್ತು ಮುಜರಾಯಿ ಖಾತೆ ಸಚಿವೆ ಸುಮಾ ವಸಂತ್ ಅವರು ಪತ್ರಕರ್ತರ ಸಾಂಘಿಕ ಪ್ರಯತ್ನದ ಫಲವಾಗಿ ತಲೆ ಎತ್ತಿರುವ ಪತ್ರಿಕ ಭವನ ಜನರ ಸಮಸ್ಯೆಗಳಿಗೆ ಸ್ಪಂದಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸಲೆಂದು ಹಾರೈಸಿದರು. ಪತ್ರಕರ್ತರ ಕನಸು ನನಸಾಗಿದ್ದು, ಇನ್ನು ಮುಂದೆ ರಾಜಕಾರಣಿಗಳ ಕನಸನ್ನು ಪತ್ರಕರ್ತರು ನನಸು ಮಾಡಬೇಕೆಂದು ಪ್ರೆಸ್ ಕ್ಲಬ್ ಕಛೇರಿ ಉದ್ಘಾಟಿಸಿದ ಮಾಜಿ ಸಚಿವ ಟಿ. ಜಾನ್ ಅವರು ತಮ್ಮ ಭಾಷಣದಲ್ಲಿ ಹಾಸ್ಯ ಚಟಾಕಿ ಹಾರಿಸಿದರು.

ಪತ್ರಿಕಾ ಭವನದ ವಾಣಿಜ್ಯ ಮಳಿಗೆಗಳನ್ನು ಜಿಲ್ಲಾ ಉಸ್ತುವಾರಿ ಸಚಿವ ಎಂ. ಎಂ. ನಾಣಯ್ಯ ಅವರು ಉದ್ಘಾಟಿಸಿ ಮಾತನಾಡಿ, ಜಿಲ್ಲೆಯ ಪತ್ರಕರ್ತರು ತನ್ನ ಬಗ್ಗೆ ಟೀಕೆಗಳನ್ನು ಮತ್ತು ಸಾಧನೆಗಳನ್ನು ಬರೆದಿದ್ದು, ತಾನು ಟೀಕೆಗಳನ್ನು ಸ್ವಾಗತಿಸುವುದಾಗಿ ಹೇಳಿದರಲ್ಲದೆ, ಪತ್ರಿಕೆಗಳು ಸಮಾಜದ ಅಂಕುಡೊಂಕುಗಳನ್ನು ತಿದ್ದುವ ಅಸ್ತ್ರಗಳಿದ್ದಂತೆ ಎಂದು ಅಭಿಪ್ರಾಯಪಟ್ಟರು.

ಪತ್ರಕರ್ತರ ಸಂಘದ ಕಛೇರಿಯನ್ನು ಜಿ. ಪಂ. ಅಧ್ಯಕ್ಷೆ ಕೆ. ಪಿ. ಚಂದ್ರಕಲಾ ಉದ್ಘಾಟಿಸಿದರು. ದಾನಿಗಳ ಶಿಲಾ ಫಲಕವನ್ನು ವಾರ್ತಾ ಇಲಾಖೆ ನಿರ್ದೇಸಕ ಡಾ. ಡಿ. ವಿ. ಗುರುಪ್ರಸಾದ ಅನಾವರಣ ಗೊಳಿಸಿದರು. ಸ್ಮರಣ ಸಂಚಿಕೆಯನ್ನು ಮಾಜಿ ಸಚಿವ ಎಂ. ಸಿ. ನಾಣಯ್ಯ ಬಿಡುಗಡೆಗೊಳಿಸಿದರೆ, ಗುತ್ತಿಗೆದಾರರನ್ನು ಟಾಟಾ ಕಾಫಿ ಸಂಸ್ಥೆಯ ಮಾಜಿ ವ್ಯವಸ್ಥಾಪಕ ನಿರ್ದೇಶಕ ಎಂ. ಎ. ಬೋಪಣ್ಣ ಸನ್ಮಾನಿಸಿದರು.

ವೇದಿಕೆಯಲ್ಲಿ ಜಿಲ್ಲಾಧಿಕಾರಿ ಜಿ. ವಿ. ರಾಮಚಂದ್ರ, ಜಿಲ್ಲಾ ಪೋಲೀಸ್ ಅಧೀಕ್ಷಕ ಉಮೇಶ ಕುಮಾರ, ಜಿ. ಪಂ. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಎಂ. ಕೆ. ಬಲದೇವಕೃಷ್ಣ, ಮೂಡಾ ಅಧ್ಯಕ್ಷ ಬಿ. ಕೆ. ಕೃಷ್ಣ ಉಪಸ್ಥಿತರಿದ್ದರು. ಎಂ. ಬಿ. ರಮೇಶ ಅವರ ಪ್ರಾರ್ಥನೆಯೊಂದಿಗೆ ಆರಂಭವಾದ ಕಾರ್ಯಕ್ರಮದಲ್ಲಿ ಎ. ಸಿ. ಕಾರ್ಯಪ್ಪ ಸ್ವಾಗತಿಸಿದರು. ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ಕೆ. ತಿಮ್ಮಪ್ಪ ಪ್ರಾಸ್ತಾವಿಕ ಭಾಷಣ ಮಾಡಿದರು. ಖಜಾಂಚಿ ಮನು ಶಣೈ ವರದಿ ವಾಚಿಸಿದರು. ಕೆ. ಕೆ. ಶಶಿಧರ ಸಂದೇಶ ವಾಚಿಸಿದರು. ಜೀವನ್ ಚಿಣ್ಣಪ್ಪ ಕಾರ್ಯಕ್ರಮ ನಿರೂಪಿಸಿದರು. ಜಿ. ಚಿದ್ವಿಲಾಸ ವಂದಿಸಿದರು.

- ಸಂಗಾತಿ

ಕೊಟ್ಟ ಸಾಲ ಕೇಳದೆ ಹೋಯ್ತು - ಮಾಡಿದ ಆರಂಭ ನೋಡದೆ ಹೋಯ್ತು.

# ಹುತ್ತರಿ ಹಬ್ಬ :

ಹುತ್ತರಿ ಹಬ್ಬ ನವಂಬರ್ ಡಿಸೆಂಬರ್ ತಿಂಗಳಲ್ಲಿ ಕೊಡಗಿನ ಜನರಿಗೆ ಸಂಭ್ರಮ. ಹೊಸ ಬೆಳೆಯನ್ನು ಮನೆಗೆ ತರುವ ಸಂಭ್ರಮದ ಹಬ್ಬವಾದ ಹುತ್ತರಿಯನ್ನು ಕೊಡಗಿನಾದ್ಯಂತ ಆಚರಿಸಲಾಗುತ್ತದೆ. (ಪುದು + ಅರಿ = ಪುದರಿ = ಪುತ್ತರಿ, ಹುತ್ತರಿ ಎಂದರೆ ಹೊಸ ಅಕ್ಕಿ ಎಂದರ್ಥ). ಕೊಡಗಿನ ಜನರ ಪ್ರಮುಖ ಹಬ್ಬಗಳಲ್ಲಿ ಒಂದಾದ ಹುತ್ತರಿ ಹಬ್ಬವು ಈ ಬಾರಿ ಡಿಸೆಂಬರ್ ಒಂದರಂದು ನಡೆಯಲಿದೆ.

ವಿಪರೀತವಾದ ಮಳೆ, ಕಾಡಾನೆಗಳ ದಾಳಿ, ಕೀಟಗಳ ಬಾಧೆಯಿಂದಾಗಿ ಈ ಬಾರಿ ಕೊಡಗಿನ ರೈತರಲ್ಲಿ ಸಂತೃಪ್ತಿಯ ಕಳೆಯಿಲ್ಲ. ಆದರೂ ಉಳಿದುಕೊಂಡಿರುವ ಭತ್ತದ ಬೆಳೆಯನ್ನು ಮನೆಗೆ ತುಂಬಿಸಿಕೊಳ್ಳುವ ಕಾರ್ಯಕ್ಕಾಗಿ ಅಣಿಯಾಗುತ್ತಿದ್ದಾರೆ. ಹಬ್ಬದ ಪೂರ್ವಭಾವಿ ಸಿದ್ಧತೆಯಾಗಿ ಮನೆಯನ್ನು ಶುಚಿಗೊಳಿಸುವುದು ಹಿಂದಿನಿಂದಲೂ ಬಂದಿರುವ ಸಂಪ್ರದಾಯ 'ಹುತ್ತರಿ ಕೆಲ್ಸ' ಎಂದೇ ಕರೆಯುವ ಈ ಶುಚಿಯ ಕಾರ್ಯದಂತೆ ಮನೆಯೊಳಗಿನ ಧೂಳನ್ನು ಜಾಡಿಸಿ, ಸುಣ್ಣ ಬಣ್ಣ ಬಳಿದು, ಮನೆಬಾಗಿಲಿಗೆ ಚೆಂಡು ಹೂವು ಹಾಗೂ ಮಾವಿನ ತೋರಣ ಕಟ್ಟಿ, ಹೊಸತನ ನೀಡಲಾಗುತ್ತದೆ.

ಹುತ್ತರಿ ಹಬ್ಬದ ದಿನದಂದು ಕುಟುಂಬದವರೆಲ್ಲಾ 'ಐನ್' ಮನೆಯಲ್ಲಿ ಸೇರುವುದು ಸಂಪ್ರದಾಯ. ಅಂದು ರಾತ್ರಿ ನಿಗಧಿತ ಶುಭದ ವೇಳೆಯಲ್ಲಿ ಗದ್ದೆಗೆ ತೆರಳಿ ಫಸಲು ತುಂಬಿದ ಭತ್ತದ ಕತ್ತಿಯ ಬುಡಕ್ಕೆ ಹಾಲು, ಜೇನು ಸುರಿದು ಬುಡವನ್ನು ಕಟ್ಟಿ, ಆಕಾಶಕ್ಕೆ ಗುಂಡು ಹಾರಿಸಿ, ಕುಟುಂಬದ ಹಿರಿಯ ವ್ಯಕ್ತಿ ಕದಿರನ್ನು ಕೊಯ್ಯುತ್ತಾರೆ. ನಂತರ 'ಪೊಲಿ ಪೊಲಿಯೇ ಬಾ' ಎಂದು ಕುಲದೇವರನ್ನು ಕರೆಯುತ್ತಾ ಮನೆಗೆ ಬಂದು ಮತ್ತೆ ಕುಲದೇವರನ್ನು ಪ್ರಾರ್ಥಿಸುತ್ತಾರೆ. ಕದಿರನ್ನು ಮನೆ ಬಾಗಿಲಿಗೆ ಹಾಗೂ ಮುಖ್ಯ ವಸ್ತುಗಳಿಗೆ ಕಟ್ಟಿ, ಬಂಧುಮಿತ್ರರಿಗೆ ನೀಡುತ್ತಾರೆ.

ಅಂದು ಮನೆಗೆ ತಂದ ಹೊಸ ಅಕ್ಕಿಯ ಪಾಯಸ, ಹುತ್ತೇರಿ, ಗೆಣಸು ಮುಂತಾದ ತಿನಿಸುಗಳೊಂದಿಗೆ ಬಾಳೆಹಣ್ಣು, ತೆಂಗಿನ ಕಾಯಿ, ಅಕ್ಕಿಹಿಟ್ಟು, , ಜೇನುತುಪ್ಪ ಬೆರೆಸಿ ತಯಾರಿಸಿದ ಹುತ್ತರಿ ಹಬ್ಬದ ವಿಶಿಷ್ಟ ತಿನಿಸಾದ 'ತಂಬಿಟ್ಟು' ಮೆಲ್ಲುತ್ತಾರೆ ಈ ದಿನ ಸಂಪೂರ್ಣವಾಗಿ ಸಸ್ಯಹಾರಿ ತಿನಿಸನ್ನು ತಯಾರಿಸುವುದು ಮತ್ತೊಂದು ವೈಶಿಷ್ಟ್ಯ. ಮನೆ ಮಂದಿಯೆಲ್ಲಾ ಸೇರಿ ಸಂಭ್ರಮದಿಂದ ಆಚರಿಸುವ ಈ ಹಬ್ಬಕ್ಕೆ ಹುತ್ತರಿ ಕೋಲಾಟ, ಮುಂತಾದ ನೃತ್ಯಗಳು ವಿಶಿಷ್ಟ ಕಳೆ ನೀಡುತ್ತವೆ. ಒಂದು ವಾರ ನಡೆಯುವ ಈ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಹುತ್ತರಿ ಕೋಲಾಟವು ಅತ್ಯಂತ ಆಕರ್ಷಕವಾದ ನೃತ್ಯ. ಗಂಡಸರು ರುಮಾಲು, ದಟ್ಟಿ, ಕುಪ್ಪಸ ಧರಿಸಿ, ಸುಮಾರು ಮೂರರಿಂದ ನಾಲ್ಕು ಅಡಿ ಉದ್ದದ ಕೋಲು ಹಿಡಿದು ಹಾಡಿಗೆ ತಕ್ಕಂತೆ ನರ್ತಿಸುವುದು ಹಾಗೂ ನೃತ್ಯದ ಕೊನೆಯ ಹಂತದಲ್ಲಿ ಕೋಲಿನಿಂದ ಹೊಡೆಯುತ್ತಾ ದುಡಿ ಪಕ್ಕವಾದ್ಯದೊಂದಿಗೆ ನರ್ತಿಸುವ ಸನ್ನಿವೇಶವು ಆಕರ್ಷಕವಾಗಿರುತ್ತದೆ. ಹಾಗೆಯೇ ಪರೆ ಆಟ ನೃತ್ಯದಲ್ಲಿ ಮೊಣಕಾಲ ಕೆಳಗೆ ಕೋಲಿನಿಂದ ಹೊಡೆಯುವಾಗ ತಪ್ಪಿಸಿಕೊಳ್ಳುವ ತುಂಬಾ ರೋಮಾಂಚಕವಾದುದು.



ಕೊಡಗಿನ ಗ್ರಾಮೀಣ ಸಂಸ್ಕೃತಿಯನ್ನು ಬಿಂಬಿಸುವ ಈಹಬ್ಬವು ಆಧುನಿಕತೆಯ ಗಾಳಿಯಿಂದಾಗಿ ಇತ್ತೀಚಿನ ವರ್ಷಗಳಲ್ಲಿ ನೈಜತೆಯನ್ನು ಕಳೆದುಕೊಳ್ಳುತ್ತಿದೆ. ಆರ್ಥಿಕ ಲಾಭದ ದೃಷ್ಟಿಯಿಂದ ಗದ್ದೆಗಳಲ್ಲಿ ಶುಂಠಿ ಬೆಳೆಯನ್ನು ಬೆಳೆಯಲಾರಂಭಿಸಿದ ನಂತರ ಕೆಲವು ಕಡೆ ಹುತ್ತರಿ ಹಬ್ಬದಂದು ಕದಿರಿಗಾಗಿ ಭತ್ತದ ಗದ್ದೆಯನ್ನು ಅರಸಿಕೊಂಡು ಹೋಗುವಂತಾಗಿದೆ. ಕೋಲಾಟ ಪರೆ ಆಟದಂತಹ ರೋಮಾಂಚನಕಾರಿ ನೃತ್ಯಗಳು ಕಲಾಮೇಳ, ಸಾಂಸ್ಕೃತಿಕ ಮೇಳಗಳು ಹಾಗೂ ಕೆಲವು ಅನಿವಾರ್ಯ ಸಂದರ್ಭ ಗಳಲ್ಲಿ ಮಾತ್ರ ಪ್ರದರ್ಶಿಸುವಂತಾಗಿರುವುದು ವಿಪರ್ಯಾಸ. ಇಂತಹದನ್ನೆಲ್ಲಾ ಪ್ರತಿ ಗ್ರಾಮದಲ್ಲಿ ಅಳವಡಿಸಿ ಕೊಂಡರೆ ತುಂಬಾ ಚೆನ್ನಾಗಿರುತ್ತದೆ. ಗೌಡ ಸಂಸ್ಕೃತಿಗೆ ಜೀವವು ಬರುವುದು.

## ಹುತ್ರಿ ಹಬ್ಬದ ಶಾಸನ 1765
## (ಚರಿತ್ರೆಯಿಂದಾಯ್ದ ಭಾಗ)

ದೊಡ್ಡ ವೀರರಾಜನ ಕಾಲದಲ್ಲಿ ಮತ್ತು ಲಿಂಗರಾಜೇಂದ್ರನ ಆಳ್ವಿಕೆ ಪ್ರಾರಂಭವಾದ 2 ವರ್ಷಗಳಲ್ಲಿ ನಾಲ್ಕು ನಾಡು ಅರಮನೆಗೆ ಹುತ್ತರಿ ಹಬ್ಬದ ಕದಿರು ತೆಗೆಯುವ ದಿವಸದಲ್ಲಿ ಅರಮನೆಯ ಪನ್ಯ ಗದ್ದೆ (ರಾಜನಸ್ವಂತ ಜಮೀನು ಈಗಿನ ಪನ್ಯ ಅಥವಾ ಪನ್ನೆ) ಯಿಂದ ಕದಿರು ತೆಗೆಯುವಾಗ ಒಂದು ಫಿರಂಗಿ ಗುಂಡು ಮಧ್ಯದಲ್ಲಿ ಒಂದು ಫಿರಂಗಿ ಗುಂಡು ಅರಮನೆ ತಲುಪಿದಾಗ ಒಂದು ಫಿರಂಗಿ ಗುಂಡು, ಹೀಗೆ ಮೂರು ಬಾರಿ ಗುಂಡುಗಳನ್ನು ಹೊಡೆಯುವ ಪದ್ಧತಿ ಇತ್ತು. ನಂತರ ಲಿಂಗರಾಜನು ಖರ್ಚು ಕಡಿಮೆ ಮಾಡುವ ಉದ್ದೇಶದಿಂದ ಫಿರಂಗಿ ಗುಂಡು ನಿಲ್ಲಿಸಿ ಈ ಕೆಳಗಿನ ಶಾಸನವನ್ನು ನಿರೂಪಿಸಿದರು. (ಅವನ ಹಿರಿಯರು ಸ್ವತಃ ಮೊದಲು ಹಾಲೇರಿ ಮನೆತನದಲ್ಲಿ ರೈತರಾಗಿದ್ದುದರಿಂದ ಹೆಚ್ಚು ಖರ್ಚು ಮಾಡಿದರೂ ದುಂದುವೆಚ್ಚ ಮಾಡುತ್ತಿರಲಿಲ್ಲವೆಂದು ತಿಳಿಯುತ್ತದೆ.)

ಇನ್ನು ಮುಂದಕ್ಕೆ ಫಿರಂಗಿಯನ್ನು ಹಾರಿಸುವುದರ ಬದಲು ವರ್ಷಂಪ್ರತಿ ಹುತ್ರಿ ಹಬ್ಬದಲ್ಲಿ ಕದಿರು ತರುವ ಮುಹೂರ್ತಕ್ಕೆ ಕದ್ರು ಕುಯ್ಯುವಾಗ್ಗೆ (ಕೇಪಿನ) ಬಾರಿನ ಕೋವಿ ಈಡು ಒಂದು. ಮಧ್ಯ ದಾರಿಯಲ್ಲಿ ಬರುವಾಗ್ಗೆ ಕೇಪಿನ ಕೋವಿ ಈಡು ಒಂದು. ಅರಮನೆ ಮೆಟ್ಟಲು ಹತ್ತುವಾಗ ಕೇಪಿನ ಕೋವಿ ಈಡು ಒಂದು. ಈ ಮೇರೆ ಬಾರು ಕೋವಿ ಈಡು ಮೇಲೆ ಪಾಲಿಸುತ್ತ ಈ ಕಾಯಿದೆಗಳು ಖಾಯಂ ಆಗಿ ನಡೆಸಿಕೊಂಡು ಬರುವುದು ಎಂಬ ಉಲ್ಲೇಖವಿದೆ.

ಬೈತಡ್ಕ ಬೆಳ್ಯಪ್ಪ, ಮಡಿಕೇರಿ.

## ಹಿರಿಯರ ಮಾತಿನ ವಿಷಯವಾಗಿರುವ ಗಾದೆ

ಮಾತೇ ಮುತ್ತು, ಮಾತೇ ಮೃತ್ಯು ಊಟ ಬಲ್ಲವನಿಗೆ ರೋಗವಿಲ್ಲ. ಮಾತು ಬಲ್ಲವನಿಗೆ ಜಗಳವಿಲ್ಲ ಕತ್ತೆಗೆ ಲತ್ತೆಯ ಪೆಟ್ಟು, ಜಾಣನಿಗೆ ಮಾತಿನ ಪೆಟ್ಟು, ಆಸೆಯೇ ದುಃಖಕ್ಕೆ ಮೂಲ, ಇದ್ದದ್ದು ಇದ್ದಂತೆ ನುಡಿದರೆ ಕೆಂಡದಂಥ ಕೋಪ.....

ಇದೆಲ್ಲಾ ಮಾತಿನ ವಿಷಯವಾಗಿರುವ ಗಾದೆಯ ಮಾತುಗಳು. ಗಾದೆಗಳು ತನ್ನಷ್ಟಕ್ಕೆ ತಾನೇ ಹುಟ್ಟಿಕೊಳ್ಳಲಿಲ್ಲ. ಹಿರಿಯರ ಅನುಭವದ ಮಾತಿನಿಂದಹೊರ ಬಂದಂತಹ ನುಡಿಮುತ್ತುಗಳು.

ತಾನಾಡುವ ಮಾತಿನಲ್ಲಿ ನಯ, ವಿನಯ ತೂಕ ಇದ್ದರೆ ಆತನ ವ್ಯಕ್ತಿತ್ವಕ್ಕೆ ಒಂದು ಗೌರವ ಬರುತ್ತದೆ. ಹಾಗೇ ಅವನು ಅಲಂಕರಿಸಿದ ಸ್ಥಾನಕ್ಕೆ ಒಂದು ಘನತೆ ಬರುತ್ತದೆ. ಮಾತಿನಲ್ಲಿ ತೂಕ ಇಲ್ಲದೆ ಬಾಯಿಗೆ ಬಂದಂತ ಮಾತಾಡುವವನನ್ನು "ರೈಲು ಬಿಡುತ್ತಾನೆಂದು" ಹೇಳುವ ರೂಢಿ ಇದೆ. ಇಲ್ಲಿ ಸತ್ಯನಿಷ್ಠುರ ವಾಗಿರುತ್ತದೆ. ಸತ್ಯವನ್ನು ಹೇಳಲು ಹೋಗಿ ವೈರತ್ವವನ್ನು ಕಟ್ಟಿ ಕೊಳ್ಳಬೇಕಾಗುತ್ತದೆ. ಜಗತ್ತಿನ ಜನರ ಸ್ವಭಾವಗಳೇ ವಿಚಿತ್ರ ವಾದುದು. ತಮ್ಮ ದೌರ್ಬಲ್ಯವನ್ನು ದೋಷಗಳನ್ನು ಮುಚ್ಚಿ ಕೊಳ್ಳುವುದು. ವ್ಯಕ್ತಿಗಳ ಸಹಜ ಗುಣ. ತಮ್ಮ ದೌರ್ಬಲ್ಯಗಳನ್ನು ಮರೆಮಾಚಿಕೊಂಡು ಇತರರೆದುರಲ್ಲಿ ಆತ್ಮಪ್ರಶಂಸೆ ಮಾಡಿ ಕೊಳ್ಳುತ್ತಿರುವಾಗ ಯಾರಾದರೊಬ್ಬರು ಅವರ ದೋಷಗಳ ಬಗ್ಗೆ ಪ್ರಸ್ತಾಪಿಸಿದರೆ ಭಯಂಕರ ಕೋಪ ಬರುತ್ತದೆ. ಈ ಗಾದೆಯು ಹಲವಾರು ಭಾಗಗಳಲ್ಲಿ ಹಲವಾರು ರೀತಿಯಲ್ಲಿ ಬಳಕೆಯಲ್ಲದೆ ಕೆಲವೆಡೆ ಇದನ್ನು ಕಂಡದ್ದು ಕಂಡಂತೆ ಆಡಿದರೆ ಕೆಂಡದಂಥ ಕೋಪ. ಎಂದರೆ ಇನ್ನೂ ಕೆಲವೆಡೆ ಇದದ್ದು ಇದ್ದಂಗೆ ಕೇಳಿದ್ರೆ ಎದ್ದು ಒಂದು ಎದೆಗೆ ಒದ್ದಂಗೆ ಆಯಿತು ಎಂದು ಖಂಡಿತ ವಾದದ ಭೀಕರ ಪರಿಣಾಮವನ್ನು ಸೂಚಿಸಿದ್ದಾರೆ. ಸರ್ವಜ್ಞನು ಕೂಡ ಖಂಡಿತವಾಗಿ ಬದುಕುವುದು ಕಷ್ಟಕರ ಎಂಬುದನ್ನು

**ಕಂಡಂತೆ ಹೇಳಿದರೆ ಕೆಂಡವಾಗುವುದು ಭೂ**
**ಮಂಡಲದೊಳಗೆ ಖಂಡಿತವನಾಡುವರ**
**ಕಂಡಿಹಂದೆ ಕಷ್ಟ ಸರ್ವಜ್ಞ** ಎಂದು ಮಾರ್ಮಿಕವಾಗಿ ನುಡಿದಿದ್ದಾನೆ.

ಆಸೆಯೇ ದುಃಖಕ್ಕೆ ಮೂಲ. ಗೌತಮ ಬುದ್ಧನ ಪ್ರಸಿದ್ಧ ವಾಣಿಯಿದು. ಸಿದ್ದನೊಬ್ಬನ ಪೂರ್ಣ ಸತ್ಯ ಬುದ್ಧಿಮಾತಿದು, ಬುದ್ಧ ತನಗೆ ಜ್ಞಾನೋದಯವಾದ ನಂತರ ಲೋಕಕ್ಕೆ ಅದರ ಬೆಳಕನ್ನು ಹಂಚುವ ಸಂದರ್ಭದಲ್ಲಿ ಜಗತ್ತಿನ ದುಃಖ ದುಮ್ಮಾನಗಳಿಗೆ ಉತ್ತರ ಕೊಡುವಾಗ 'ಆಸೆಯೇ ದುಃಖಕ್ಕೆ ಮೂಲ' ಎಂದು ವಿಚಿತ್ರ ವೆನಿಸಬಹುದಾದರು ಕಟು ಸತ್ಯ. ಸುಖದ ಅನ್ವೇಷಣೆಯಲ್ಲಿಯೇ ಮನುಷ್ಯ ದುಃಖವನ್ನು ತಂದುಕೊಳ್ಳುತ್ತಿದ್ದಾನೆ. ಮನುಷ್ಯ ಆಶಾಜೀವಿ. ಬದುಕಿಗೊಂದು ಆಸೆ ಇರಬೇಕು ನಿಜ. ಆದರೆ ಅದೇ ಅತಿಯಾದಾಗ ದುರಾಸೆಯಾಗಿ ದುರ್ದಸೆಗೀಡು ಮಾಡುತ್ತದೆ ಎಂಬುದೇ ಈ ಮಾತಿನ ಸೂಚಿತಾರ್ಥ. ಪ್ರತಿಯೊಬ್ಬನಿಗೂ ತನ್ನ ಬದುಕಿಗೆ ತಕ್ಕ ತನ್ನ ಸಮರ್ಥಕ್ಕೆ ಆಸೆ, ಆಕಾಂಕ್ಷೆ, ಕನಸುಗಳಿರುವುದು ತಪ್ಪೇನಲ್ಲ. ಅದಕ್ಕೆ ವಿರುದ್ಧವಾಗಿ ತನ್ನ ಸಾಮರ್ಥ್ಯ ಮೀರಿ ಕನಸು ಕಂಡದ್ದಾದರೆ ಅದಕ್ಕೆ ತಕ್ಕ ಬೆಲೆಯನ್ನು ತೆರಲೇಬೇಕಾಗುತ್ತದೆ. 'ನೆಲುವಿಗೆ ಹಾರದ ಬೆಕ್ಕು ಆಕಾಶಕ್ಕೆ ಹಾರೀತೆ?' ಹಾಗೊಂದು ವೇಳೆ ಹಾರುವ ಅವಿವೇಕತನ ಮಾಡಿದ್ದಾದರೆ ಮೈಕೈ ಮುರಿದು ಕೊಂಡು ಬೀಳಬೇಕಾಗುತ್ತದೆ.

ಆಸೆ ಮಿತಿಮೀರಿದಾಗ ವ್ಯಕ್ತಿ ತನ್ನ ಬಯಕೆಯ ತೃಪ್ತಿಗಾಗಿ ಅಧಃಪತನಕ್ಕೂ ಇಳಿಯುತ್ತಾನೆ. ಪ್ರಾಪ್ತಿಯಾದಾಗ ಮದೋನ್ಮತ್ತ ನಾಗುತ್ತಾನೆ. ಒಟ್ಟಿನಲ್ಲಿ ವ್ಯಕ್ತಿಯ ಅತಿಯಾದ ಆಸೆಯಿಂದ ವ್ಯಕ್ತಿ ಹಾಗೂ ಸಮಾಜಗಳೆರಡಕ್ಕೂ ವಿನಾಶ. ಹಿಂದೆ ರಾಜ ಮಹರಾಜರುಗಳು ತಮ್ಮ ಸಾಮ್ರಾಜ್ಯ ವಿಸ್ತರಣಾಕಾಂಕ್ಷೆಯಿಂದ ಲಕ್ಷಾಂತರ ಸೈನಿಕರನ್ನು, ಧನವನ್ನು, ವ್ಯರ್ಥವಾಗಿ ಹಾಳು ಮಾಡುತ್ತಿದ್ದರು. ಒಬ್ಬ ವ್ಯಕ್ತಿಯ ಸ್ವಾರ್ಥಕ್ಕೆ ಸಾವಿರಾರು ಜನರ ಬಲಿಯಾಗುತ್ತಿತ್ತು. ಒಟ್ಟಿನಲ್ಲಿ ಆಸೆಯಿಂದ ನಾಶವಿದೆ. ಆಸೆ ಇರಲಿ ದುರಾಸೆ ಬೇಡ. ಅತಿ ಬೇಡ ಮಿತಿ ಇರಲಿ ಎಂಬುದೇ ಬುದ್ಧನ ಬುದ್ಧಿವಾದ. ಇದು ನಮ್ಮವರಿಗೂ ಅನ್ವಯಿಸುವುದೇ?

ಬರಹ : **ಕುಯ್ಯಮುಡಿ ಸುನೀಲ್**, ಸಣ್ಣಪುಲಿಕೋಟು

---

**ಮಲ್ಲಿಗೆ :**

ತುಂತುರು ಹನಿ ಬೀಳುತಿತ್ತು,
ಆಗ ತಾನೆ ಮಲ್ಲಿಗೆ ಅರಳುತಿತ್ತು ;
ಸುತ್ತಲೆಲ್ಲಾ ಸುವಾಸನೆ
ಅಡಿಯಿಟ್ಟೆ ಅತ್ತ ಮೆಲ್ಲನೆ ॥
ನೆನಪಾಯಿತೊಂದು ಗಾದೆ
'ಹಸಿರ ರಾಶಿಯಲ್ಲಿ ಮೊಸರು ಚೆಲ್ಲಿದೆ'
ಬಿರಿದರಳುತ್ತಿದ್ದವು ಮಲ್ಲಿಗೆ
ನಾಳಿನ ಚಿಂತೆಯೇ ಇಲ್ಲವುಗಳಿಗೆ ॥
ಹೂವಿನ ಆ ರೂಪ....
ಅದುವೇ ಅದಕೆ ಶಾಪ !
ಇರೂವುದು ಗಿಡದಲ್ಲೆ..... ಪಾಪ,
ಅರಿವಾಗದು ಅದರೊಡಲ ತಾಪ ; ॥
ಏರುವುದು ದೇವರ ಮುಡಿಗೆ
ಬೀಗುವುದು ಅದೃಷ್ಟದ ಬಾಳಿಗೆ
ಹೆಂಗಳೆಯರ ಕೇಶದ ನಡುವೆ
ಕಪ್ಪು-ಬಿಳುಪಿನ ಸಂದೇಶ ಸಾರುವೆ ॥
ಆದರ್ಶವೂ ಅದೆಂದೂ ವಿಶ್ವಕ್ಕೆ
ಹೊಂದಿಕೊಳ್ಳುವುದು ತನ್ನಾದೃಷ್ಟಕೆ.
ತುಂತುರು ಹನಿ ಬೀಳುತ್ತಿತ್ತು,
ಆಗ ತಾನೆ ಮಲ್ಲಿಗೆ ಅರಳುತ್ತಿತ್ತು ॥

– ಮೂಡಗದ್ದೆ ಕೃಪಾ, ತಿತಿಮತಿ

**ಕೊಡಗು ಸಂಗಾತಿ, ಪಾಕ್ಷಿಕನ್ನ ತಕ್ಕಂಡೊದಕು**

---

ಕಂಡ ಹೊಲ ಮಾಡುವುದಕ್ಕಿಂತ ತುಂಡು ಹೊಲ ಮಾಡುವುದೇ ಲೇಸು.

# ವಾಂಟೆಡ್ ಮಿಸ್ಟರ್ ರಾಜು [ನಮ್ಮ ರಾಜು ಮಂಜನ ಕಥೆ]

ಲೇಖನ : ಶಂಕರನ ಬಸಪ್ಪ

ಧಾರಾವಾಹಿ - 38

ಹಿಂದೆ ನಡದದ್.......

ಮದ್ವೆ ಚಪ್ಪರದ ಕೆಳಗೆ 8-10 ಜನ ಆಗುಂತಕರು ರಾಜುನ ಫ್ರೆಂಡ್ಸ್‌ಗತಾ ಹೇಳಿಕಂಡ್ ಬಂದ್ ಕುದ್ದಿದ್ದೊ. ಅವರೊಟ್ಟಿಗೆ ಮಿ. ರಾಜುನ ಫ್ರೆಂಡ್ ಆಗಿ ಮಿ. ಧರ್ಮಪಾಲ್ ಉಪಚರಿಸಿಕಂಡ್ ಮಾತಾಡ್ಸಿಕಂಡ್ ಇತ್. ಆಗ ಅವೆಲ್ಲಾ ಮಿ. ರಾಜುನಬಗ್ಗೆ ಇದ್ದ ಅಭಿಪ್ರಾಯನ ಹೇಳುತ್ತಿದ್ದೊ. ಹಂಗೇ ಅಲ್ಲಿಗೆ ಬಂದಿದ್ದ ಪೋಲೀಸ್ ಒಬ್ಬ ರಾಜುನ ಒಳ್ಳೆ ಗುಣದ ಬಗ್ಗೆ ಅವನ ಶಕ್ತಿ ಸಾಮರ್ಥ್ಯದ ಬಗ್ಗೆ ಹೇಳಿ ಅವನ ಬಗ್ಗೆ ಒಳ್ಳೆ ಅಭಿಪ್ರಾಯ ಮೂಡವಂಗೆ ಹೇಳ್ತಿತ್. ಇಲ್ಲಿ ಚಪ್ಪರದ ಕೆಳಗೆ ತಂಗೆ ಶೋಭನ ಧಾರೆಮುಹೂರ್ತ ಸಮಯದಲ್ಲಿ ವರಕ್ಷಿಣೆ ಕೊಡುವುದರಲಿ ತಕಂಬದರಲಿ ತಕರಾರು ಬಂದ್ ಕೂಸಿಗೆ ವರದಕ್ಷಿಣೆನ ಆ ಗಂಡ್ ಮುಟ್ಟದೇ ಹೆಣ್ಣಿನ ಕತ್ತಿಗೆ ಮಾಂಗಲ್ಯನ ಕಟ್ಟಿದೆ........

ಮುಂದಕೆ...........

ಈಗ ಮದುಮಗಳಾಗಿ ಅಲಂಕಾರ ಮಾಡಿಕಂಡ್ ತಲೆ ಬೊಗ್ಗಿಸಿಕಂಡ್ ಮದುವಳಿಗೆಯ ಸಪರೇಟ್ ರೂಂ ಒಳಗೆ ನಿಂತಿದ್ದ ಕುಂಟಿ ಶಾಂತಿ ಗೂಡೆನ ಮೈಸೂರು ಕಡೆಂದ ಜೊತೆಲಿ ಬಂದಿದ್ದಂತಹ ಪೋಲಿಸ್ ದಫೇದಾರ ಭೀಮಯ್ಯನವು ಎರಡೂ ಕೈಯಿಂದ ಎತ್ತಿಕಂಡ್ ಧಾರೆ ಮಂಟಪದ ಕೆಳಗೆ ತಂದ್ ಇಳ್ಸಿತ್.

ಈಗ ಅಲ್ಲಿ ಚಪ್ಪರದ ಕೆಳಗೆ ಬಂದ್ ಸೇರಿದ್ದ ಎಲ್ಲಾ ಜನಿಕ್ಕೂ ಈಗ ನಡಿಯಕೆ ಇರ್ವ ಮದ್ವೆಲಿ ಈ ಕುಂಟಿ ಗೂಡೆಗೆ ತಾಳಿ ಕಟ್ಟಕೆ ಮದುಮಂಜ ಯಾರ್ ಆಗಿರ್ದೊ? ತಾ ಬಹಳ ಕುತೂಹಲ ಖಾತುರರಾಗಿ ನೋಡಿತಿದ್ದೊ. ಆದ್ರೇ ಆ ಸಮಯಕ್ಕಾಗಲೇ ಈ ಕುಂಟಿ ಗೂಡೆನ ಇವರ ಮಂಜ ರಾಜುನೇ ಮದ್ವೆ ಆದು ತಾ ಗೊತ್ತಾಗಿ ಹೋಗಿತ್. "ಆದ್ರೇ? ಆದ್ರೇ ಆ ರಾಜು ಇನ್ನೂ ಈ ಚಪ್ಪರದ ಕೆಳಗೆ ಬಂದೇ ಇತ್ತ್‌ಲೆ. ಆ ಮಿ. ರಾಜು ಈಗ ಎಲ್ಲಾ ಜನಿಕ್ಕೂ ತುಂಬಾ ಅವಶ್ಯವಾಗಿ ಬೇಕಾಗಿಟ್ಟು. ಆ ರಾಜು ಮಂಜನ ಮುಖದರ್ಶನನೇ ಇಲ್ಲದೆ ಅವನ ಬಗ್ಗೆ ಈಗ ಇಲ್ಲಿ ಇದ್ದ ಜನ ಹತ್ತಾರು ತರಹದ ಊಹಾಪೋಹದ ಅಭಿಪ್ರಾಯನ ಪಡುತ್ತಿದ್ದೊ.

ಇಲ್ಲಿ ನಡೆಯುತ್ತಿದ್ದ ಪ್ರತೀ ಒಂದು ಘಟನೆ ಗಳಿಗೂ ಆ ಮಿ. ರಾಜುನೇ ಕಾರಣನಾಗುಟ್ಟು. ಎಲ್ಲವರ ದೃಷ್ಟಿಲಿ ಈಗ ಅಂವ ಒಬ್ಬ ದೊಡ್ಡ ಹಿರೋ ಆಗಿಟ್ಟು. ಎಲ್ಲವರ ದೃಷ್ಟಿಲೂ ಅಂವ ಒಬ್ಬ ಅತೀಂದ್ರಶಕ್ತಿಯ ಸಾಮಾಜದ ನಾಯಕನಾಗಿಟ್ಟು. ಮಿ. ರಾಜು ಈಗ ತುಂಬಾ ಜನ ಸಮಾಜ ಘಾತುಕರಿಗೆ ತಮ್ಮ ಸೇಡ್‌ನ ತೀರ್ಸಿಕಂಬಕ್ಕೋಸ್ಕರ ಬೇಕಾಗಿಟ್ಟು ಮಿ. ರಾಜು. ರಾಜು ಮಂಜ ನಮ್ಮ ನಾಡ್‌ನ ಕೀರ್ತಿನ ಎತ್ತಿ ಹಿಡ್ದಂತಹ ಪರಾಕ್ರಮಿ. ರಾಜು ಮಂಜ ಅವರ ಅಪ್ಪ ಅವ್ವ, ತಂಗೆಗೆ ಅರ್ಜೆಂಟಾಗಿಯೇ ಬೇಕಾಗಿಟ್ಟು. ಅದಕ್ಕೋಸ್ಕರನೇ ಈಗ ನಮ್ಮ ರಾಜು Wanted Mr. Raju" ಈ ಧಾರಾ ಮಂಟಪದ ಸೀತಾವಳಿ ಚಪ್ಪರದ ಒಳಗೆ ಇದೇ ಕ್ಷಣಲಿ ಯಾವುದೇ ತರಲಿ ಬಂದ್ ಪ್ರತ್ಯಕ್ಷ ಆದುತಾ ಎಲ್ಲವೂ ತುದಿಕಾಲುಲಿ ನಿಂತ್‌ಕಂಡ್ ನಿರೀಕ್ಷಿಸುತ್ತಿದ್ದೊ.

ಇಂಥಾ ಒಂದ್ ಅಂಗ ಊನ ಆಗಿದ್ದ ಕುಂಟಿ ಗೂಡೆ ಹೊಳೆಗೆ ಹಾರಿ ಪ್ರಾಣ ಕಳ್ಕೊಂಬೊಂತಹ ಸಮಯಲಿ ಈ ಮಿ. ರಾಜು ತಾನೂ ನೀರಿಗೆ ಹಾರಿ ಅವಳ ಪ್ರಾಣನ ಉಳ್ಸಿದೂ ಅಲ್ಲದೆ, ಸಮಾಜಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಈ ನತದೃಷ್ಠ ಗೂಡೆಗೆ ನಿನ್ನ ನಾನ್ ಮದ್ವೆ ಆಗಿ ಬಾಳ್‌ನ ಕೊಟ್ಟನೆತಾ ಹೇಳಿದ ಆ ಮಿ. ರಾಜು. ಅಬ್ಬಾ ! ಎಂಥಹ ದೊಡ್ಡ ವಿಶಾಲ ಮನೋಭಾವದ ವ್ಯಕ್ತಿ, ಎಂಥಹ ಸಹಾಯ ಹಸ್ತದ ವ್ಯಕ್ತಿ. ಕೆಟ್ಟವರಿಗೆ ಯಮನಂತೆ ಇರ್ವ ವ್ಯಕ್ತಿ. ಅವನ ದರ್ಶನ ಭಾಗ್ಯ ನಮಿಗೆ ಆದ್ರೇ ಅಷ್ಟೇ ಸಾಕ್. ಅಂವನ ಅದ್ಭುತ ವ್ಯಕ್ತಿತ್ವದ ಶಕ್ತಿ ಇಂದ್ ನಮ್ಮಂತಹ ಭ್ರಷ್ಟಾಚಾರ ಜನರ ಅವಿವೇಕದ ಕಣ್ಣ್‌ನ ತೆರೆಸಿದ ಮಹಾನ್ ವ್ಯಕ್ತಿ ಈಗ ನಮ್ಮ ಮುಂದೆ ಪ್ರತ್ಯಕ್ಷ ಆದ್ರೇ ಅಂವನ ನೋಡುದೇ ನಮ್ಮ ಭಾಗ್ಯ. ಈಗ ಅಂವನ ಬುಟ್ಟ್‌ ಅಂವನ ಮನಃಪೂರ್ವಕ ಆಗಿ ಅಭಿನಂದಿಸಿ ಹರಸಕ್ಕುತಾ ಕೈಲಿ ಅಕ್ಕಿಕಾಳ್ ಅಕ್ಷತೆನ ಹಿಡ್ಕಂಡ್ ಈ ಮೈಸೂರು ಕಡೆಯ ಗೆಸ್ಟ್‌ಗ ಮಿ. ರಾಜುನ ನಿರೀಕ್ಷೆಲಿ ನಿಂತಿದ್ದೊ.

ಅಷ್ಟೊತ್ತಿಗೆ ಮಿ. ಮಹೇಂದ್ರ ಪಾಲ್ ಎರಡ್ ಭಾರೀ ಗಾತ್ರ ಹೂವಿನ ಹಾರನ ಬಲಗೈಲಿ ಹಿಡ್‌ಕಂಡ್ ತನ್ನ ಸ್ನೇಹಿತ ಬೌದ್ಧ ಸಂನ್ಯಾಸಿ ವೇಶದಾರಿ ಬೋಳು ಮಂಡೆಗೆ ರೆಶ್ಮಿದ್ ಒಂದ್ ಜರತಾರಿ ಪೇಟ ಅದರ ಮ್ಯಾಲೆ ಕೆಂಪು ಕೋರ್ ಚೌಕ ಹಾಕಿಸಿ ಮಿ. ಧರ್ಮಪಾಲ್‌ನ ಕೈ ಹಿಡಿದ ಆ ಮದುಳಿಗೆ ಹೆಣ್ಣ್‌ನ ಎದುರು ತಂದ್ ನಿಲ್ಸಿತ್. ಅಷ್ಟೊತ್ತಿಗೆ ಅಲ್ಲಿ ನೆರೆದಿದ್ದ ತುಂಬಾ ಜನಿಗೆ ಈ ಧರ್ಮಪಾಲ್ ತೇಳುವ ಟಿಬೇಟಿಯನ್ ಸನ್ಯಾಸಿನೇ ನಮ್ಮ ರಾಜು ಮಂಜ ತಾ ಗುರ್ತು ಹಿಡ್ದ್‌ಬುಟ್ಟು ಹೋ ಇವು ನಮ್ಮ ರಾಜೂ.....ರಾಜು ಮಂಜ. ಇವ್ ನಮ್ಮ ರಾಜುಭಾವತಾ ಎಲ್ಲಾ ಖುಷಿಲಿ ಅಂವನ ಸುತ್ತಲೂ ಕವರಾಗಿ ಬುಟ್ಟೋ.

ಆಗ ಅಪ್ಪ ಅವ್ವಂದಿರ್ ಮಂಜ ರಾಜುನ ಹತ್ರ ಓಡಿಬಂದ್ ಅಂವನ ತಲೆನ ಸವರಿ ನನ್ನ ಮಂಜ ರಾಜು ನೀನ್ ದುಡ್ಡ್ ಸಂಪಾದನೆ ಮಾಡಿಕಂಡ್ ಬಂದದೂ ಅಲ್ಲದೆ ನಮಿಗೆ ಒಬ್ಲು ಸೊಸೆನ ಕೂಡಾ ಸಂಪಾದಿಸಿ ಕಂಡ್ ಬಂದುಬುಟ್ಟ ಮಜ್ಜನೇ... ತುಂಬಾ ಸಂತೋಷ. ನಮಿಗೆಲ್ಲಾ ತುಂಬಾ ಖುಷಿ ಆಗುಟ್ಟು ಅವಳ ಕುತ್ತಿಗೆಗೆ ಬೇಗ ತಾಳಿಕಟ್ಟ್‌ತಾ ಹೇಳ್ದೊ. ಅಷ್ಟೊತ್ತಿಗೆ ಮಿ. ಮಹೇಂದ್ರಪಾಲ್ ಈ ಇಬ್ಬರಿಗೂ ಒಂದೊಂದು ಹೂವಿನ ಹಾರನ ಕೊಟ್ಟು ದರ ಪರಸ್ಪರ ಕುತ್ತಿಗೆಗ ಹಾಕಿಕೆ ಹೇಳ್ತ್. ಆಮೇಲೆ ಮಿ. ರಾಜು ತನ್ನ ಉದ್ದನೆಯ ನಿಲುವಂಗಿ ಜೊಬೊಳಗಿಂದ ಚಿನ್ನದ ಸರ್ಪಡಿಗೆ ಸರನ ಹೊರಗೆ ತೆಗ್ದ್ ಈ ಚಿನ್ನದ ಗೊಂಬೆ ಹಂಗಿದ್ದ ಶಾಂತಿ ಗೂಡೆನ ಕುತಿಗೆಗೆ ಕಟ್ಟಿತ್. ಆಗ ವಾದ್ಯದವು ಜೋರಾಗಿ ವಾಲಗ ಊದಿಕೆ ಶುರು ಮಾಡ್ದೊ. ಸುತ್ತ ಇದ್ದ ಹಿರಿಕಿರಿಯ ಜನ ಈ ಅಪರೂಪದ ಹೆಣ್ಣ್ ಗಂಡ್ ದಂಪತಿಗಳಿಗೆ ಮನಸಾರೆ ಆಶೀರ್ವಾದ ಮಾಡಿಕಂಡ್ ಅಕ್ಕಿಕಾಳ್ ಅಕ್ಷತೆನ ಅವರ ತಲೆ ಮೇಲೆ ಹಾಕಿದೊ.

ಹಸ್ತದ ಮಳೆಲಿ ಆರಂಭ ಬೇಡ. ಚಿತ್ತದ ಮಳೆಲಿ ಹೇರಾಟ ಬೇಡ

ಅಲ್ಲಿ ಸುತ್ತ ಗುಂಪು ಸೇರಿದ್ದ ಸ್ವಲ್ಪ ಜನ ಪಿಂಗಿದ ಮೇಲೆ ಈ ಮೈಸೂರು ಕಡೇಂದ ಬಂದ ಸ್ಪೆಷಲ್ ಗೆಸ್ಟ್‌ಗ ಒಟ್ಟಿಗೆ ಈ ದಂಪತಿಗಳ ಹತ್ರ ಬಂದೊ. ಮಿ. ರಾಜೂ ನಿಂಗೆ ಶುಭವಾಗಲಿ. ಈ ಹೊಸ ದಂಪತಿಗ ಸುಖವಾಗಿ, ಸಂತೋಷವಾಗಿ, ಧೀರ್ಘಕಾಲ ಬಾಳಲಿ. ನಿನ್ನ ಸದ್ಗುಣ ಮತ್ತು ಕೀರ್ತಿ, ಶಕ್ತಿ ಇನ್ನೂ ಹೆಚ್ಚ್ ಆಗುವಂಗೆ ಆ ದೇವರ ಸಹಾಯ ನಿಂಗೆ ಇರಲಿತ್ತೇಳಿ ಎಲ್ಲಾ ಒಟ್ಟಿಗೆಈ ದಂಪತಿಗಳ ತಲೆ ಮೇಲೆ ಅಕ್ಕಿಕಾಳ್‌ನ ಹಾಕಿ ಹೃದಯಪೂರ್ವಕ ಆಗಿ ಸಂತೋಷಲಿ ಆಶೀರ್ವಾದ ಮಾಡಿದೊ.

ಇವರ ಗುಂಪ್‌ಲಿ ವುಲ್ಲಾಭಕ್ಷ್, ಕೃಷ್ಣಾವತಾರ್‌ಸಿಂಗ್, ಕರಿಬಸವಯ್ಯ ಇವೆಲ್ಲಾ ಒಟ್ಟಿಗೆ ಬಂದ್ ಮಿ. ರಾಜುನ ತಬ್ಬಿಕಂಡ್ ನೀನ್ ಇಂದ್ ಒಬ್ಬ ಪವಾಡ ಪುರುಷನಾಗಿ ಹೋಗೊಳೊ. ನೀನ್ ನಮ್ಮ ತಲೇಲಿ ಇದ್ದ ದುರ್ಗುಣ ಬುದ್ಧಿನ ನಿನ್ನ ವಿಶಾಲವಾದ ಮನೋಬಲ ಹೋಗ್ಸಿ ಬುಟ್ಟುಟು. ನಿನ್ನ ಮುಂದೆ ನಾವೆಲ್ಲಾ ತುಂಬಾ ಸಣ್ಣವು. ದಯವಿಟ್ಟು ನಮ್ಮನ್ನು ನೀನ್ ಕ್ಷಮಿಸಕು ತಾ ಕೇಳಿಕಂಡೆವೆ. ನಾವು ಕಟುಕರ್‌ಗ ಕೆಟ್ಟ ಮನ್ಸ್‌ಂದೇ ನಾವು ಇಲ್ಲಿಗೆ ಬಂದವು. ನಿನ್ನ ಮೇಲೆ ಸೇಡ್ ತೀರ್ಸಿಕಂಬಕೆ. ನಿನ್ನನ ಹುಡುಕಿಕಂಡ್ ಇಲ್ಲಿಗೆ ಬಂದೊ. ಒಂದೇ ಕಡೆ ಒಟ್ಟಿಗೆ ಸೇರಿಕಂಡೊ. ಆದ್ರೆ ನೀನ್ ಇಂಥಹ ಕೆಟ್ಟ ವಿಷ ಸರ್ಪಕೆ ನೀನ್ ಹಾಲೆರೆದ್ ಆ ಕೆಟ್ಟ ವಿಷದ ಬುದ್ಧಿನ ನಿನ್ನ ನಿರ್ವಂಚನೆ ಆಥಿತಿ ಸತ್ಕಾರಂದ ತಿದ್ದಿ ಬುಟ್ಟೆ. ನಾವೆಲ್ಲಾ ಇಲ್ಲಿಗೆ ಬಂದ ಮೇಲೆ ನಮಿಗೆ ಗೊತ್ತಾತ್ ನೀನ್ ಯಾವ ತರದ ಇಕ್ಕಟ್‌ನ ಪರಿಸ್ಥಿತಿಗೆ ಸಿಕ್ಕಿಹಾಕಿಕಂಡಿದ್ದತಾ. ಆದೇ ಅಂತಹ ಒತ್ತಡಕ್ಕೆ ನೀನ್ ಸಿಕ್ಕಿರುಕಾಕನ ಕೂಡಾ ಅಷ್ಟೊಂದ್ ಹಣಾನ ಹೊಂದ್ಸಿಕೆ ನೀನ್ ಕಳ್ಳತನದ ಮಾರ್ಗನ ಹಿಡ್ತಿಲೆ. ಅದರ ಬದಲಾಗಿ ನಮ್ಮಂತಹ ಸಮಾಜನ ಸೋಶಣೆ ಮಾಡ್ದಂತಹ ಕದೀಮರ ಜಾಡ್‌ನ ಗುರ್ತು ಹಿಡ್ದ್ ನಮಿಗೆಲ್ಲಾ ಇಂಡೇರಕ್ಟಾಗಿ ಪಾಠ ಹೇಳಿಕೊಡುವುದರ ಮೂಲಕ ನೀನ್ ಹಣನ ಸಂಪಾದನೆ ಮಾಡ್ದ. ನಿನ್ನ ಚಿನ್ನದಂತಹ ಗುಣ ಈಗಿನ ಯುವ ಶಕ್ತಿಗಳಿಗೆ ಆದರ್ಶಮಾರ್ಗವಾಗುಟ್ಟು. ಯುವಜನ ಹುಡುಗರಿಗೆ ಆದರ್ಶ ವ್ಯಕ್ತಿ ಆಗಿ ನಿನ್ನ ಕಾರ್ಯನ ಮಾಡ್ದರಂದ ನಿನ್ನ ಈ ಆತ್ಮಬಲದ ಮುಂದೆ ನಾವೆಲ್ಲಾ ನಿನಗೆ ಶರಣಾಗಿ ಹೋಗ್ಯೆಳೊ.

ನಿನ್ನಿಂದಾಗಿ ಈಗ ನಮಿಗೆ ಗೊತ್ತಾತ್. ಮನುಷ್ಯತ್ತೇಳ್ರೇ ಏನ್? ಪ್ರೀತಿ ವಿಶ್ವಾಸತ್ತೇಳ್ರೇ ಏನ್? ತಾ ನಾವೆಲ್ಲಾ ಇಲ್ಲಿ ನಿಮ್ಮ ಊರಿಗೆ ಬಂದ ಮೇಲೆ ನೋಡ್ದೊ. ನಿಮ್ಮ ಈ ಜನರ ನಿರ್ಮಲ ಹೃದಯದ ಶ್ರೀಮಂತಿಕೆನ, ಇಂತಹ ಜನರ ನಮ್ಮ ಸಿಟಿಜನರಲ್ಲಿ ಟಾರ್ಚ್‌ಲೈಟ್ ಹಾಕಂಡ್ ಹುಡಿಕಿ ನೋಡ್ರೂ ಎಲ್ಲೂ ಒಬ್ಬನೂ ಸಿಕ್ಕಿಕ್ಕಿಲ್ಲೆ. ಹಂಗಾಗಿ ನಮ್ಮಲ್ಲಿ ಈತರದ ಕೆಟ್ಟ ದುರ್ಗುಣ ಬೆಳ್ದ್ ಬಂದ್ ಬುಡ್ತ್.

You are great really you are ever great. God bless you, God bless you, ಎಲ್ಲವೂ ತುಂಬಾ ಹೊತ್ತ್ ಈ ಮಿ. ರಾಜುನ ಹೊಗಳಿಕಂಡ್ ತಬ್ಬಾಡಿಕಂಡ್ ತಮ್ಮ ಪ್ರೀತಿನ ಸಂತೋಷನ ತೋರ್ಸಿಕಂಡೊ. ಇದರೆಲ್ಲಾ ಈ ಮನೆ ಜನ ಮತ್ತೆ ಊರುವನ ಜನ ಪಿಣಿಪಿಣಿತಾ ಕಣ್ಣ್ ಬುಟ್ಟ್‌ಕಂಡ್ ನೋಡ್ತಿದ್ದೊ. ಯಾಕೆಂದರೆ ಈ ಜನಿಕೆ ಏನ್ ಗೊತ್ತ್ ನಮ್ಮ ರಾಜು ಮಂಜ ಮೈಸೂರ್‌ಗೆ ಹೋದ ಮೇಲೆ ಇಂತಹ ದೊಡ್ಡ ದೊಡ್ಡ ದರೋಡೆಕೋರರ, ಸಮಾಜ ದ್ರೋಹಿಗಳ ಎದುರಿಸಿ ನಿಂತಿತಾತ? ಕಳ್ಳ ವ್ಯವಹಾರಗಳನ್ನ ಮಾಡುತ್ತಿದ್ದವರ ಬಯಲಿಗೆ ಎಳೆಯುವ ಪ್ರಯತ್ನನ ಮಾಡಿಟ್ಟುತಾ. ಯಾರ್‍ಯಾರಿಗೆ ಏನೇನ್ ಒಳ್ಳೆದ್ ಮಾಡಿ ಸಹಾಯ ಮಾಡಿಟ್ಟುತಾ? ಎಲ್ಲಾ ಈಗ ತಾನೇ ಇವರ ಬಾಯಿಂದಲೇ ಒಂದೊಂದಾಗಿ ಗುಟ್ಟುಗ ಹೊರಬರುತಾ ಇತ್. ಅದಕ್ಕೋಸ್ಕರನೇ ಈ ರಾಜು ಮಂಜ ಹಿಂಗೆ ಗುರ್ತ್ ಸಿಕ್ಕದ ವೇಷನ ಹಾಕಂಡ್ ಬಂದದ್‌ತಾ ಒಂದು ಪಕ್ಷ ಮೈಸೂರ್‌ಂದ ಬಂದ ಜನ ಏಕಿದಂ ಈ ರಾಜುನ ಮೇಲೆ ತಿರ್ಗಿಬಿದ್ದ್ ಬುಟ್ಟಿದ್ದರೆ ಏನ್ ಗತಿ ಆಗಿ ಹೋಕಿತ್. ಈ ಬಂದಿದ್ದವರ ಸುಮಾರ್ ಹಣಗ ಉರುಳಿ ಹೋಗಿತ್. ಸದ್ಯ ಏನೂ ಗಲಾಟೆ ಇಲ್ಲದಂಗೆ ನಮ್ಮ ಬೋಪಜ್ಜನ ಮನೆ ಮದ್ವೆ ಜಂಬಾರ ಕಳ್ತಲ್ಲಾತ್ತೇಳಿಕಂಡ್ ಖುಷಿಪಟ್ಟ್‌ಕಂಡೊ.

ಅಷ್ಟೊತ್ತಿಗೆ ಕೆಲವು ಅಕ್ಕಂದಿರ್‌ಗ ಹೊಸ ದಂಪತಿಗಳ ಕರ್ಕಂಡ್ ಮೊದಲೆ ಸಾಸ್ತ್ರಕ್ಕೆ ಕುದ್ದಿದ್ದ ದಂಪತಿಗಳ ಜೊತೆಗೆ ಇನ್ನೂ ಕೆಲವು ಶಾಸ್ತ್ರಗಳ ಮಾಡಿಕೆ ಶುರುಮಾಡ್ದೊ. ಈಗ ಈ ಮೈಸೂರ್‌ನ ಸ್ಪೆಷಲ್ ಗೆಸ್ಟ್‌ಗ ತಮ್ಮ ಸೇಡ್‌ನ ಭಾವನೆನ ಬುಟ್ಟು ಒಂದೇ ಘಳಿಗೆ ಒಳಗೆ ನಿಜವಾದ ಸ್ನೇಹಿತರ್‌ಗ ಆಗಿಬುಟ್ಟೊ. ಈಗ ಇವು ಕೂಡಾ ಎರಡ್ ಜೊತೆ ದಂಪತಿಗಳ ಹಿಂದೆ ಮುಂದೆ ಸೇರಿಕಂಡ್ ಪೋಟೋ ವೀಡಿಯೋ ಗಳಿಗೆ ಪೋಸ್ ಕೊಡಿಕೆ ಶುರು ಮಾಡ್ದೊ.

ಆಗ ಮಿ. ಮಹೇಂದ್ರಪಾಲ್ ಈ ಗೆಸ್ಟ್‌ಗಳ ಎರಡನೇ ಪಂಕ್ತೀಲಿ ಊಟಕೆ ಕೂರಿಕೆ ಬಂದ್ ಕರ್ತ್. No, No, ಬೇಡ ನಾವು ಕೂಡಾ ಈ ಹೊಸ ಜೋಡಿಗಳ ಒಟ್ಟಿಗೆ ಊಟ ಮಾಡ್ದು. ಈಗ ಬೇಡ ಬಿಡೀತಾ ಹೇಳ್ದೊ. ಊಟನ ಮುಗ್ಸಿಕಂಡ್ ಎದ್ದ್ ಬಂದ ಜನ ಚಪ್ಪರದ ಕೆಳಗೆ ಬಂದ್ ಎಲೆ ಅಡಿಕೆ, ಬೀಡಿ ಸಿಗರೇಟ್ ಗಳಿಗೆ ಕೈಹಾಕುತಿದ್ದೊ. ಆದ್ರೇ ಇನ್ನೊಂದ್ ಕಡೆ ದೊಡ್ಡವು ಸಣ್ಣವು ಕೆಲವು ಹೆಣ್ಣ್ ಗೂಡೆಗ ಕೂಡಾ ವಾದ್ಯದವರ ಸಂಗೀತಕ್ಕೆ ಸರಿ ಸರಿಯಾಗಿ ಕೊಣ್ತ ಹಾಕಿಕೆ ಶುರು ಮಾಡಿದ್ದೊ. ಆಗ ಈ ಮೈಸೂರು ಕಡೆ ಗೆಸ್ಟ್‌ಗ ಈ ಊರ್‌ನ ಜನರ ಮದ್ವೆಲಿ ಕುಣಿತಿರುವ ಕೊಣ್ತನ ನೋಡಿಕಂಡ್ ಕುಷಿ ಪಟ್ಟ್‌ಕಂಡ್ ಸ್ವಲ್ಪ ಹೊತ್ತ್ ಅಲ್ಲೇ ಕುದ್ದ್‌ಕಂಡೊ.

ಆಗ ಮಿ. ಮಹೇಂದ್ರಪಾಲ್ ಮತ್ತೆ ಅಂವನ ಫ್ರೆಂಡ್ಸ್‌ಗ ಈ ಎರಡ್ ಜೊತೆ ನವದಂಪತಿಗ ಆರತಕ್ಷತೆಗೆ ಕೂರ್ಸಿಕೆ ರೆಡಿ ಮಾಡ್ಸಿತ್. ಅಲ್ಲೇ ಮಂಟಪದ ಕೆಳಗೆ ನಾಲ್ಕು ಒಳ್ಳೆ ಮಹರಾಜರು ಕೂರ್ವಂತಹ ಸಿಂಹಾಸನದಂತ ಕುರ್ಚಿಗಳ ತಂದ್‌ಹಾಕಿದೊ. ಆಗ ಆ ಕುರ್ಚಿಗೆ ಈ ದಂಪತಿಗಳ ಅಡೋಳಿಗ ಕೈಹಿಡ್ಕಂಡ್ ಬಂದ್ ಆರತಕ್ಷತೆಗೆ ಕೂರ್ಸಿದೊ. ಈಗ ಈ ನವದಂಪತಿಗಳಿಗೆ ಕಟ್ಟುವ ಮುಹೂರ್ತಕ್ಕೆ ಕೂರ್ಸಿದೊ. ಆಗ ಜನ ನಾ ಮುಂದು, ತಾ ಮುಂದುತಾ (ಮುಯಿ ಹಾಕಿಕೆ) ಹಣ ಕಟ್ಟಿ. ತಮ್ಮ ಕೈಯಲ್ಲಾದ ಪ್ರಸೆಂಟೇಶನ್‌ಗಳ ಕೊಡಿಕೆ ಸಾಲುಗಟ್ಟಿಕಂಡ್ ಜನ ಬರ್ತಿದ್ದೊ. ಇದರ ನೋಡಿಕೆ ಈಗ ಮೈಸೂರು ಫ್ರೆಂಡ್ಸ್‌ಗ ಅಲ್ಲೇ ಇವರ ಎದುರುಗಡೆ ಕುರ್ಚಿನ

ಹಾಕಂಡ್ ಈ ಕೊಡಗು ಜನರ ನಿಯತ್ತಾದ ಪದ್ಧತಿಗಳ ನೋಡಿಕಂಡ್ ಕುದ್ದಿದ್ದೊ.

ಆಗ ಈ ಫ್ರೆಂಡ್ಸ್‌ಗ ಇಲ್ಲಿನ ಈ ಪದ್ಧತಿನ ನೋಡಿ ಇನ್ನೂ ಒಂದ್ ವಿಷಯನ ಮೆಚ್ಚಿಕಂಡೊ. ಅದೇನ್ತ್ತೇಳಿರೆ. ಇಲ್ಲಿ ಎಂಥಹ ಬಡವನಾಗಲೀ, ಶ್ರೀಮಂತನಾಗಲೀ, ನಿಯತ್ತಾಗಿ ಮದ್ವೆ ಜಂಬಾರಕ್ಕೆ ಬಂದವು ಒಬ್ಬನೂ ಬಿಡದಂಗೆ ಎಲ್ಲವೂ ಮುಯ್ಯಿ ಹಾಕುವ (ಪ್ರೆಸೆಂಟೇಶನ್) ಮಾಡ್ವ ಪದ್ಧತಿನ ಕಡ್ಡಾಯ ಆಗಿ ಪಾಲಿಸುತಿದ್ವೆತ.ಆದ್ರೇ ನಮ್ಮ ಮೈಸೂರು ಜನ ಮಾತ್ರ ಮದ್ವೆ ಊಟಕ್ಕಾದ್ರೆ ಜೊತೆಗೆ ಮಕ್ಕುಮರಿಗಳನ್ನ ಕೈಲಿ ಕೈಗೊಂದ್ ಕಾಲಿಗೊಂದ್ ತಾ ಜೊತೆಗೆ ಎಳ್ಕಂಡ್ ಹೋಗಿ ಅಲ್ಲಿ ಭರ್ಜರಿ ಆಗಿ ಊಟ ಮಾಡಿಕಂಡ್ ಆದ ಮೇಲೆ ನೆಟ್ಟಂಗೆ ವಾಪಾಸ್ ಚಪ್ಪಲ್‌ನ ಮೆಟ್ಟಿಕಂಡ್ ವಾಪಾಸ್ ಬಂದುಬುಟ್ಟವೆ. ಇವ್ರು ಮದುವೆ ಮನೆಗೆ ಹೋದು ಬರೇ ಊಟ ಮಾಡಿಕೆ ಮಾತ್ರ. ಮದ್ವೆ ಮನೆಗೆ ಹೋಗಿ ಅಲ್ಲಿ ಹೊಸ ದಂಪತಿಗಳಿಗೆ ಆಶೀರ್ವಾದ ಮಾಡಕ್ಕು, ಮದ್ವೆ ಮಾಡುತ್ತಿರುವ ಹಿರಿಯರ ಕಂಡ್ ಮಾತಾಡ್ಸಿಕಂಡ್ ಬರೋಕುತ್ತೇಳುವ ಸಾಮಾನ್ಯ ಮರ್ಯಾದಿನೂ ನಡ್ಸಿಕಂಬಕೆ ಮನ್ಸ್ ಮಾಡುದಿಲ್ಲೆ. ನಮ್ಮ ಕಡೆ ಎಲ್ಲಾ ಜನ ಹುಚ್ಚಿ ಮದ್ವೆಲಿ ಉಂಡವನೇ ಜಾಣತ್ತೇಳುವ ಲೆಕ್ಕಚಾರದವೇ ಇರ್ದುತ ಮಾತಾಡಿಕಂಡವೆ.

ಊಟೋಪಚಾರ ಮುಕ್ಕಾಲು ಪಾಲ್ ಮುಗ್ದತ್ತೇಳ್ಕನ ಈ ಎರಡ್ ಜೊತೆ ನವದಂಪತಿಗಳ ಇವರ ಆಡೋಳಿಗ ಕೈಹಿಡ್ದ್ ಅಲ್ಲಿಂದ ಎಳ್ಸಿದೊ. ಆಮೇಲೆ ನೆಟ್ಟಂಗೆ ಅಲ್ಲಿಂದ ಊಟ ಮಾಡ್ವ ಜಾಗಕ್ಕೆ ಕರ್ಕಂಡ್ ಬಂದ್ ಈ ಎರಡ್ ಜೊತೆ ದಂಪತಿಗಳ ಅಲ್ಲೇ ಸಾಲ್‌ಲಿ ಪಕ್ಕಲೆ ಪಕ್ಕಲೆ ಕೂರ್ಸಿದೊ. ಈ ಊಟಕ್ಕೆ ಕೂರ್ಸಿದ್ದಲ್ಲಿ ಅತ್ತಿಗೆ ನಾದಿನಿಗ ಬಾವ ಮಕ್ಕ ಕೆಲವು ಹೈದಂಗ ಎಲ್ಲಾ ಸೇರಿಕಂಡ್ ಏನೇನೋ ತಮಾಷೆ ಮಾಡಿಕೆ ಸುರುಮಾಡ್ದೊ. ಇವರ ಬಾಯಿಗೆ ಅವ್ರು, ಅವರ ಬಾಯಿಗೆ ಇವು ಹಿಡ್ದ್ ತುರ್ಕಿಕೆ ಪ್ರಯತ್ನ ಮಾಡ್ತಿದ್ದೊ. ಹಿಂದೆ ಬಾಯಿಗೆ ಕೊಡಿಕೆ ಬದ್ಲ್ ಅವರವರ ಮೂಗಿಗೂ ಮೆತ್ತಿಕೆ ನೋಡ್ತಿದ್ದೋ. ಹಂಗೇ ಇವು ನಗೆ ಆಡಿಕಂಡ್ ಸ್ವಲ್ಪ ಹೊತ್ ಈ ಜೋಡಿಗಳ ಗೋಳು ಹೊಯ್ದುಕಂಡ್ ಊಟನ ಮಾಡ್ಸಿದೊ. ಕೊನೆ ಪಂಕ್ತಿಗೆ ನೆಂಟರ್ ಗೂಡೆಗ ಬಡ್ಸಿಕೆ ನಿಂತ್‌ಕಂಡೊ. ಈ ಮೈಸೂರು ಫ್ರೆಂಡ್ಸ್‌ಗ ಈಗ ಬಹಳ ನೆಮ್ಮದಿಲಿ ಒಳ್ಳೆ ಸಂತೋಷಲಿ ತಮಿಗೆ ಬೇಕಾದಷ್ಟು ವಿಸ್ಕಿನ ಕುಡ್ಕಂಡ್ ಈ ಪಂಕ್ತಿಲಿ ಊಟಕ್ಕೆ ಕುದ್ದ್‌ಕಂಡಿದ್ದೊ. ಇವುಕೆ ಈಗ ಮನ್ಸ್‌ಲಿ ಏನೋ ಒಂದ್ ಆತ್ಮತೃಪ್ತಿ ಇತ್. ಜೊತೆಗೆ ತಲೆಲಿ ಮತ್ತ್ ಏರಿತ್. ಜೊತೆಗೆ ಈಗ ಊಟ ಬಡ್ಸವರಿಗಿಂತ ಬಡ್ಸಿಸಿಕೊಂಡ್ ತಿಂಬುವಕೆನೇ ಬಹಳ ಉತ್ಸಾಹ ಇದ್ದಂಗೆ ಕಂಡತ್. ಹಂಗಾಗಿ ಈ ಗೆಸ್ಟ್‌ಗ ಬೇಡ ಬೇಡ ಸಾಕ್ ಸಾಕ್ತಾ ಹೇಳಿಕಂಡೇ ಒಂದೊಂದು ಕೆ.ಜಿ. ಮಾಂಸನ ನುಂಗಿದ್ದೊ. ಈ ನಮ್ಮ ಊರ್‌ನ ಗೂಡೆಗ ಎಲ್ಲಾ ಇಂತವುಕೆ ಮದ್ವೆ ಮನೆಲಿ ಬಡ್ಸಿಕೆ ನಿಂತ್‌ಕಂಡರೆ ಎಷ್ಟ್ ತಿಂದ್ ಬುಟ್ಟವೆತ ಗೊತ್ತೇ ಆದುಲ್ಲೆ. ಹೊಟ್ಟೆ ತುಂಬಾ ಮಾಂಸ ಗೈಪು. ಕುಡಿಯಕೆ ಬೇಕಾದಷ್ಟ್ ಕಳ್ಳ್ ಇದ್ದದರಂದ ಈ ಜನಕ್ಕೆ ತುಂಬಾ ಖುಷಿ ಆಗಿ ಹೋಗಿತ್ತ್. ಆಗ ಎಲ್ಲಾ ಒಟ್ಟಿಗೆ ಸೇರಿಕಂಡ್ ನಮ್ಮ ಮಿ. ರಾಜುನ ಹೊಗಳಿಕೆ ಸುರು ಮಾಡ್ದೊ. ಮಿ. ರಾಜುನ ಮೇಲೆ ಇದ್ದ ಸಿಟ್ಟ್‌ನ ದ್ವೇಷನನೆಲ್ಲಾ ಮರ್ತ್ ಈ ಬಂದಿದ ಜನ ಎಲ್ಲಾ ಆಪ್ತ ಸ್ನೇಹಿತರಾಗಿ ಮಾರ್ಪಾಡ್ ಆಗಿ ಬುಟ್ಟೊ.

ಈ ಜನ ರಾಜು ಮಂಜನ ಹೊಗಳಿ ಕೊಂಡಾಡುದರ ನೋಡ್ವ ಅಪ್ಪ ಬೋಪಜ್ಜಗೆ ಮಂಜನ ಮೇಲೆ ಹೆಚ್ಚ್ ಪ್ರೀತಿ ಬಂದುಬುಡ್ತ್. ಅಜ್ಜಂಗೆ ಈಗ ತುಂಬಾ ಸಮಾಧಾನ ಆತ್. ಮಂಜನ ಸೊಸೆನ ಅವು ಊಟಕ್ಕೆ ಕುದ್ದಲ್ಲಿ ಬಂದ್ ಎದುರಗಡೇನೆ ಇವು ಕೂಡಾ ಕುದ್ದ್‌ಕಂಡೊ. ಬನ್ನಿನೆ ಮಕ್ಳೆ ನಂಗೂ ಈಗ ಊಟಕ್ಕೆ ಬಡ್ಸಿ. ಈಗ ನನ್ನ ಮನ್ಸಿಗೆ ಸ್ವಲ್ಪ ಸಮಾಧಾನ ಆಗುಟ್ಟುತಾ ಹೇಳ್ದೊ. ಆ ಹೆಣ್ಣ್ ಮಕ್ಕಳ ಕೈಲೇ ಊಟ ಹಾಕ್ಸಿಕಂಡ್ ನೆಮ್ಮದಿಲಿ ಊಟ ಮಾಡ್ದೊ. ಪಾಪ ಇವು ಕಳ್ದ ಒಂದು ತಿಂಗ್ಳುನಿಂದ್ಲೂ ಒಂದ್ ಹೊತ್ತ್ ಊಟನ ಬೇಜಾರಿಲ್ಲದೆ ಊಟ ಮಾಡಿತ್ತ್‌ಲೆ.

ಮಿ. ಮಹೇಂದ್ರಪಾಲ್‌ಮತ್ತೆ ಮದುಮಂಜ ಮಿ.ರಾಜು ವಾಪಾಸ್ ಹೊರಟ ನೆಂಟರಿಸ್ಕ್ಬರ್‌ಗಳನ್ನೆಲ್ಲಾ ಬೀಳ್ಕೊಡುತ್ತಾ ಕಳ್ಸಿ ಕೊಡುತಿತ್. ಕೊನೆಗೆ ಈ ಮೈಸೂರುನ ಫ್ರೆಂಡ್ಸ್‌ಗಳ ಹತ್ರ ಬಂದ್ ನೀವೆಲ್ಲಾ ಇನ್ನೂ ಒಂದ್ ದಿನ ಇಲ್ಲೆ ಉಳಕಂಡ್ ನಾಳೆ ದಿನ ಆರಾಂ ಆಗಿ ಹೊರಡಬಹುದಲ್ಲಾ? ನಾವೆಲ್ಲಾ ಈ ಮದ್ವೆಗಲಾಟೆಲಿ ನಿಮ್ಮನ್ನ ಹೆಚ್ಚಿಗೆ ನಿಗಾ ಕೊಟ್ಟ್ ನೋಡಿಕಂಬಕ್ಕೆ ಆತ್ಲೆ ಕಂಡದೆ. ನಮ್ಮ ಉಪಚಾರಲಿ ಏನಾದ್ರೂ ಹೆಚ್ಚ್‌ಕಮಿ ಆಗಿದ್ರೆ ಬೇಜಾರ್ ಮಾಡಿಕಂಬೊದು ಬೇಡತಾ ಕೇಳಿಕಂಡಿ ಆಗ ಈ ಫ್ರೆಂಡ್ಸ್‌ಗ ಒಟ್ಟಿಗೆ ಹೇಳ್ದೋ. ಅಯ್ಯೋಯ್ಯೋ ನೀವು ಬೇಜಾರು ಮಾಡಿಕಂಬೋದೇ ಬೇಡಿ. ಪಾಪ ನೀವೆಲ್ಲಾ ನಮ್ಮನ್ನ ರಾಜೋಪಚಾರ ಮಾಡಿ ನೋಡಿಕಂಡೊಳರಿ. ಇಂತಹ ಒಂದ್ ಮನ ಪೂರ್ವಕವಾದ ಅತಿಥಿ ಸತ್ಕಾರನ ನಾವುಗ ನಮ್ಮ ಲೈಫಲಿ ಕಂಡೇ ಇತ್‌ಲೆ. ಪ್ರೀತಿ, ಪ್ರೇಮ, ವಾತ್ಸಲ್ಯತ್ತೇಳ್ದು ಕಾಸ್ ಕೊಟ್ರೆ ಸಿಕ್ಕುವಂತದಲ್ಲ. ಇದೆಲ್ಲಾ ನಮಿಗೆ ಕನಸಿನ ಮಾತೇ ಆಗಿತ್. ನಮಿಗೆಲ್ಲಾ ಕಾಸು ಕೊಟ್ಟರೂ ಸಿಕ್ಕದೇ ಇರ್‍ವಂತಹ ವಾತ್ಸಲ್ಯ ಪೂರ್ಣವಾದ ಈ ಉಪಚಾರ ನಮಿಗೆ ಇನ್ ಬೇರೆಲ್ಲೂ ಖಂಡಿತಾ ಸಿಕ್ಕುದಿಲ್ಲೆ ಆದಿರ್‍ಲಿ. ನಮ್ಮ ಜೀವಮಾನಲೇ ಮರೆಯಕೆ ಸಾಧ್ಯ ಆಗದಂತಹ ಒಂದ್ ಟರ್ನಿಂಗ್ ಪಾಯಿಂಟ್‌ನ ಇಲ್ಲಿ ನೀವು ತೋರ್‍ಸಿ ಕೊಟ್ಟೊಳರಿ. ನಮ್ಮ ಮಂಕ್ ಕವಿದಿದ್ದ ದುರ್ಬುದ್ಧಿನ ಹೋಗಲಾಡಿಸಿ ಮನುಷ್ಯತ್ವ ಅಂದ್ರೆ ಏನ್‌ತಾ ಅರ್ಥ ಮಾಡಿಸಿಕೊಟ್ಟೊಳರಿ ಇನ್ ಮುಂದೆ ನೀವು ತೋರ್‍ಸಿ ಕೊಟ್ಟಂತಹ ಸನ್ಮಾರ್ಗನೇ ನಾವು ಅನುಸರಿಸಿ ಕಂಡವೆ ತಾ ಹೇಳಿ ಆ ಎಲ್ಲಾ ಫ್ರೆಂಡ್ಸ್‌ಗ ಮಿ. ರಾಜುನ ಅಪ್ಪ ಬೋಪಜ್ಜ ಹಂಗೇ ಅಲ್ಲಿದ್ದ ಹಿರಿಕಿರಿಯವರ ಮಾತಾಡಿಸಿ ಅವುಕೆಲ್ಲಾ ವಂದನೆ ಹೇಳಿ ಅಲ್ಲಿಂದ ಮೈಸೂರಿಗೆ ಹೊರಟೂ.

ಮಿ. ರಾಜುಗೆ ಅದೃಷ್ಟದ ಜೊತೆಗೆ ಅವರ ಮನೆದೇವರು ಗುರು ಕಾರಣವನ ಕೃಪೆ ಇದ್ದುಟ್ಟು ಕಂಡದೆ. ಹಿಂಗೆ ಒಂದ್ ತಿಂಗ ಪೂರ್ತ ಒಂದೊಂದು ದಿನಕ್ಕೆ ಒಂದೊಂದು ವೇಷನ ಹಾಕಂಡ್ ಒಂದೊಂದು ಊರಲಿ ತಿರ್ಗಾಡಿಕಂಡ್ ಹೋದಲೆಲ್ಲಾ ಅದಕ್ಕೆ ಸರಿಯಾದ ಅವಕಾಸ, ಕಾರಣಂಗಗ ಸಿಕ್ಕಿಕಂಡ್ ಬರುತಾ ಇತಲ್ಲಾ.

ಇವಂಗೆ ಯಾವುದೋ ಒಂದ್ ಅಗೋಚರ ಚೈತನ್ಯದ ಬೆಂಬಲ ಇತ್ತ್‌ಕಂಡದೆ. ಯಾಕೆತ್ತೇಳಿರೆ ಇದ್‌ಕ್ಕೆಲ್ಲಾ ಬಂದೊದಗುವ ಸಂದರ್ಭಗ ಅದಕ್ಕೆ ಪ್ರೇರಣೆ ಆಗುವ ಸಮಯಗ ಎಲ್ಲಾ ಕಾಕತಾಳೀಯವಾಗಿ ಒಂದಕೊಂದ್ ಹೊಂದಿಕಂಡ್ ಜೊತೆಗೆ ಎಲ್ಲಾ ಸಂದರ್ಭಗಳಲ್ಲೂ ಶಕ್ತಿಯುಕ್ತಿಗಳಿಂದ ಧೈರ್ಯವಾಗಿ ಎದುರಿಸುವ ಚಿತ್ತ ಮತ್ತೆ ಅದರ ಜೊತೆಗೆ ಅದೃಷ್ಟ ಕೂಡಾ ಒಟ್ಟಿಗೆ ಇತ್ತ್. ಇಂತಹ ಸಂದರ್ಭಗ ಮನುಷ್ಯಂಗೆ ಜೀವಮಾನಲಿ ಆಗಾಗ ಬಾದುಲೆ. ಆದ್ರೇ ಹಿಂಗೆ ಅದಾಗಿ ಒಂದೊಂದ್ ಆಕಾಕನ ಅದರ ನಾವು ಒಳ್ಳೆ ರೀತಿಲಿ ಉಪಯೋಗಿಸಿಕಂಡರೆ ಮಾತ್ರ ಅದರಂದ ಕೀರ್ತಿ, ಹಣ ಸಂಪದಾನೆ ಮತ್ತೆ ಹೆಸರ್‌ನ ಕೂಡಾ ಸಂಪಾದಿಸಕ್ಕ್ ಅಲ್ಲದೆ ಇದರಂದ ಬೇರೆ ಜನಕ್ಕೂ ಸಹಾಯ ಆದೆತ್ತೇಳಕ್ಕ್. ಇದಕ್ಕೆ ನಮ್ಮ 'ವಾಂಟೆಡ್ ಮಿ. ರಾಜು'ನ ಸಾಮರ್ಥಣೆಯ ಕೆಲಸಗಳೇ ಸಾಕ್ಷಿ.

ನಮ್ಮಂತಹವು ನಿಮ್ಮಂತಹವು ಹಿಂಗೆ ಆ ದೇವರ ದಯೆ ಇದ್ದರೆ ಮಾತ್ರ ಇಂತಹ ಸಾಹಸದ ಕೆಲಸನ ಮಾಡಕ್ಕ್‌ಪ್ಪೆ. ಆದ್ರ್‌ದ ನೀವು ಕೂಡಾ ಮಿ. ರಾಜು ತರ ಧೈರ್ಯಲಿ ಆತ್ಮವಿಶ್ವಾಸಲಿ ನ್ಯಾಯ ರೀತಿಲಿ, ಸಮಾಜಲಿ ಬೇರೆಯವುಕೆ ದಯ, ಮತ್ತೆ ಸಹಾಯ ಮಾಡಿಕಂಡ್ ಮಾರ್ಗದರ್ಶಕನಾಗುವ ತರಲಿ ಜೀವನ ಸಾಗಿಸಿಕಂಬ ನಿರ್ಧಾರನ ಮಾಡಿಕಂಬೊದು ಅತಿ ಮುಖ್ಯತ ಹೇಳಕ್ಕ್.

ಕೊಡಗು ಸಂಗಾತಿಯ ಸಹೃದಯ ಓದುಗರರಿಗೆಲ್ಲಾ ಆತ್ಮೀಯ ವಂದನೆಗ. – ಮುಕ್ತ್

ವಿ. ಸೂ. : 38 ಸಂಚಿಕೆಲಿ ವಾಂಟೆಡ್ ಮಿಸ್ಟರ್ ರಾಜುತ್ತೇಳ್ವ ಕಾದಂಬರಿನ ಅರೆಭಾಸೆಲಿ ಪ್ರಥಮವಾಗಿ ಬರ್ದ್ ಧಾರವಾಹಿಯಾಗಿ ಕೊಡಗು ಸಂಗಾತಿಲಿ ಬಂದದರ ಬಗ್ಗೆ ನಮ್ಮ ಪ್ರಿಯ ಓದುಗರ್ ತಮ್ಮ ಅನಿಸಿಕೆನ ಸಂಗಾತಿಗೆ ಬರ್ದ್ ತಿಳ್ಸೂಕುತ ನಮ್ಮ ವಿನಂತಿ. – ಸಂ.

ಲೇಖಿಕರ ವಿಳಾಸ : ಶಂಕರನ ಬಸಪ್ಪ, 61/1, ಕಾವೇರಿ ಬಡಾವಣೆ, ಸುಜಾತ ಟೆಂಟ್ ಹಿಂಭಾಗ, ಕೆ. ಆರ್. ಎಸ್. ರಸ್ತೆ, ಮೈಸೂರು - 16

## "ಗೌಡ ಮಿತ್ರ ಬಳಗ" ಹೂಟ್‌ಗಳ್ಳಿ, ಮೈಸೂರು.

ಮೈಸೂರು ಸನಿಹದ ಕೃಷ್ಣರಾಜ ಸಾಗರದ ಬಲಮುರಿ ಯಲ್ಲಿರುವ "ಸರ್ವಧರ್ಮ ಆಶ್ರಮ"ದ ಬಯಲಲ್ಲಿ ಮೈಸೂರಿನ ಹೂಟ್‌ಗಳ್ಳಿಯ ಆಸುಪಾಸುನ ಕೊಡಗು ಗೌಡ ಮಿತ್ರ ಬಂಧುಗಳು ದಿನಾಂಕ 7-10-2001ರಲ್ಲಿ ಕೊಡಗಿನ ನಾಡಹಬ್ಬ ಕೈಲು ಮುಹೂರ್ತವನ್ನು ಸಂಸಾರ ಸಮೇತರಾಗಿ ಸುಮಾರು 100 ಮಿಕ್ಕಿ ಬಾಂಧವರು ವಿಜೃಂಭಣೆಯಿಂದ ಆಚರಿಸಿದರು.

ಸಮಾರಂಭದ ಅಧ್ಯಕ್ಷತೆಯನ್ನು ಮುಕ್ಕಾಟೀರ ಉಲ್ಲಾಸನವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಮೂಟೇರ ಶ್ರೀ ನಂಜುಂಡನವರು ಆಗಮಿಸಿದ್ದರು. ಶ್ರೀಯುತರು ಮಾತನಾಡುತ್ತಾ ನಮ್ಮ ಜನಾಂಗದ ಯುವಪೀಳಿಗೆಯವರು ನಮ್ಮ ಸಂಸ್ಕೃತಿ, ಭಾಷೆ ಅಲ್ಲದೆ ತಮ್ಮಲ್ಲಿರುವ ಇನ್ನಿತರ ಪ್ರತಿಭೆಯನ್ನು ಗುರುತಿಸಿಕೊಳ್ಳಲು ಇಂತಹ ಸಂಘಟನೆಯ ಅನಿವಾರ್ಯತೆ ಮತ್ತು ಮಹತ್ವವನ್ನು ವಿವರವಾಗಿ ತಿಳಿಸಿದರು. ತಾಯಂದಿಯರು ತಮ್ಮ ಮಕ್ಕಳಿಗೆ ಚಿಕ್ಕಂದಿನಿಂದಲೇ ಅರೆಭಾಷೆ ಮತ್ತು ಸಂಸ್ಕೃತಿಯ ಪದ್ಧತಿ, ಆಚಾರ, ವಿಚಾರ, ಕಂದಚಾರಗಳ ಬಗ್ಗೆ ತಿಳಿಹೇಳುವಂತೆ ಒತ್ತಾಯಿಸಿದರು. ಆಗ ಮಾತ್ರವೇ ನಮ್ಮ ಹಿರಿಯರಿಂದ ಬಳುವಳಿಯಾಗಿ ಬಂದ ಸಂಸ್ಕೃತಿ, ಭಾಷೆ, ಸಂಪ್ರದಾಯಗಳು ಉಳಿಯಲು ಸಾಧ್ಯವೆಂದು ಹೇಳಿದರು.

ಇನ್ನೊಬ್ಬ ಮುಖ್ಯಅತಿಥಿ ಶ್ರೀ ಪೂಜಾರೀರ ಬೋಪಯ್ಯ ನವರು ಮಾತನಾಡಿ ಬಳಗಕ್ಕೆ ಮಾರ್ಗದರ್ಶನ ನೀಡಿದಲ್ಲದೆ ರೂ. 1000/-ಅನ್ನು ದೇಣಿಗೆಯಾಗಿ ನೀಡಿ ಯುವಕರ ಶ್ರಮವನ್ನು ಶ್ಲಾಘಿಸಿದರು. ಅಲ್ಲದೆ ಮುಂದೆಯೂ ಸಹ ತಮ್ಮ ಸಹಕಾರವನ್ನು ನೀಡುವರೆಂದು ತಿಳಿಸಿದರು. ದಿನದ ಕಾರ್ಯಕ್ರಮದಂತೆ ನಡೆದ ಆಟೋಟಗಳ ಸ್ಪರ್ಧೆಯಲ್ಲಿ ಜಯಗಳಿಸಿದ ಸ್ಪರ್ಧಿಗಳಿಗೆ ಶ್ರೀಮತಿ ಚೆರಿಯಮನೆ ನೀಲವ್ವ ಬೆಳ್ಯಪ್ಪನವರು ಬಹುಮಾನವನ್ನು ವಿತರಿಸಿದರು. ಸಂಘದ ಅಧ್ಯಕ್ಷರಾದ ಶ್ರೀ ಮುಕ್ಕಾಟೀರ ಉಲ್ಲಾಸ ನವರು ನೆರೆದ ಸರ್ವರನ್ನು ಸ್ವಾಗತಿಸಿ ಮತ್ತು ವಂದಿಸುವುದರೊಂದಿಗೆ ಅಂದಿನ ಕಾರ್ಯಕ್ರಮಕ್ಕೆ ಮುಕ್ತಾಯ ಹಾಡಿದರು.

ವರದಿ : ಬೈನೆರವನ ಇಂದ್ರಕುಮಾರ್

## ಮೈಸೂರಿನಲ್ಲಿ ಕಾವೇರಿತೀರ್ಥ ವಿತರಣೆ

ಕೊಡಗು ಗೌಡ ಮಾಜಿ ಸೈನಿಕರ ಕ್ಷೇಮಾಭಿವೃದ್ಧಿ ಸಂಘ, ಮೈಸೂರುವತಿಯಿಂದ ದ್ವಿತೀಯ ಬಾರಿಗೆ ಮೈಸೂರಿನ ಜಯಲಕ್ಷ್ಮಿ ಪುರಂನಲ್ಲಿರುವ ಕೊಡಗು ಗೌಡ ವಿದ್ಯಾರ್ಥಿ ನಿಲಯದಲ್ಲಿ ಅಕ್ಟೋಬರ್ 18ನೇ ಗುರುವಾರ ಬೆಳಿಗ್ಗೆ 9 ಗಂಟೆಗೆ ಸರಿಯಾಗಿ ಶ್ರೀ ಕಾವೇರಿ ಮಾತೆಯ ಪುಣ್ಯ ತೀರ್ಥವನ್ನು ಸಾರ್ವಜನಿಕರಿಗೆ ವಿತರಿಸಲಾಯಿತು. ತಲಕಾವೇರಿಯಿಂದ ಶ್ರೀ ಪಟ್ಟಡ ಪ್ರಭಾಕರ ರವರು ಮೈಸೂರಿಗೆ ಬೆಳಗಿನ ಜಾವ 4 ಗಂಟೆಗೆ ತಂದ ಪುಣ್ಯ ತೀರ್ಥವನ್ನು ಶ್ರದ್ಧಾ ಭಕ್ತಿಯಿಂದ ಬರಮಾಡಿಕೊಳ್ಳಲಾಯಿತು. ಅಂದಾಜು 300ಕ್ಕಿಂತಲೂ ಹೆಚ್ಚು ಮಂದಿ ಭಕ್ತಾದಿಗಳು ಬಂದು ತೀರ್ಥ ಹಾಗೂ ಪ್ರಸಾದ ಸ್ವೀಕರಿಸಿ ಕಾವೇರಿ ಮಾತೆಯ ಅನುಗ್ರಹಕ್ಕೆ ಪಾತ್ರರಾದರು. ಇದೇ ಸಂದರ್ಭದಲ್ಲಿ ನಮ್ಮ ಮೈಸೂರಿನ ಗೌಡ ಬಾಂಧವರಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಸಾರ್ವಜನಿಕರು ಭಾಗವಹಿಸಿದ್ದು ಕಾವೇರಿ ತೀರ್ಥ ಪ್ರಸಾದ ಹಂಚಿಕೆಗೆ ಹೆಚ್ಚಿನ ಮೆರುಗನ್ನು ನೀಡಿತೆಂದು ಹೇಳಬಹುದು. ಮುಂದಿನ ವರ್ಷವೂ ಸಹ ತೀರ್ಥಯಾತ್ರೆ ಕೈಗೊಂಡು ಭಕ್ತಿಪೂರ್ವಕವಾಗಿ ವಿದ್ಯಾರ್ಥಿ ನಿಲಯದಲ್ಲಿ ವಿತರಿಸಲಾಗುವುದು. ಇನ್ನು ಮುಂದಾದರು ನಮ್ಮ ಜನಾಂಗದವರು ಜನಾಂಗದ ಒಳಿತಿನ ಬಗ್ಗೆ ಸಭೆ ಸಮಾರಂಭ ನಡೆಸಿದಲ್ಲಿ ಅಧಿಕ ಸಂಖ್ಯೆಯಲ್ಲಿ ಭಾಗವಹಿಸಬೇಕಾಗಿ ಈ ಮೂಲಕ ಕೇಳಿಕೊಳ್ಳುತ್ತೇನೆ.

-ಕುಯ್ಯಮುಡಿ ರಾಮಪ್ಪ, ಉಪಾಧ್ಯಕ್ಷರು ಕೊ.ಗೌ.ಮಾ.ಸೈ.ಸಂ., ಮೈಸೂರು

**ಹುಚ್ಚೆಳ್ಳು ಮಳೆಲಿ ಬಿತ್ತಿದರೆ ಹುಲ್ಲೂ ಇಲ್ಲ - ಕಾಳೂ ಇಲ್ಲ**

# ದೀಪಾವಳಿ ಹಬ್ಬ ಮತ್ತು ಬಲಿಯೇಂದ್ರ ಪೂಜೆ

ದೀಪಾವಳಿ ಹಬ್ಬವನ್ನು ಸಾಧಾರಣವಾಗಿ ಕೊಡಗಿನ ಕೆಲವು ಭಾಗಗಳಲ್ಲಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹೆಚ್ಚಾಗಿ ಆಚರಣೆ ಮಾಡುತ್ತಾರೆ. ಈ ಹಬ್ಬವು 'ಕಾವೇರಿ ಜಾತ್ರೆ' ತೀರ್ಥೋದ್ಭವ' ಕಳೆದು ಪ್ರಥಮವಾಗಿ ಬರುವ ಅಮವಾಸ್ಯೆಯ ದಿನ ಪ್ರಾರಂಭವಾಗುವುದು.

ಇದು ವಾಮನ ಅವತಾರ ಭಗವಂತನು ಬಲಿಯೇಂದ್ರ ರಾಜನಿಂದ ಮೂರು ಅಡಿ ಜಾಗ ದಾನ ಕೇಳಿ ಬಲಿಯೇಂದ್ರನನ್ನು ಮೋಸಗೊಳಿಸಿ ಭಗವಂತನು ಧರ್ಮರಕ್ಷಣೆ ಮಾಡಿದ ಪುರಾಣ ಕಥೆಗಳ ಆಧಾರದ ಮೇಲೆ ಕಲಿಯುಗದಲ್ಲಿ ಸಹ ನಿನ್ನನ್ನು ಕೊಂಡಾಡಲಿ ಎಂದು ಹರಿಯು ಬಲಿಯೇಂದ್ರನಿಗೆ ವರವಿತ್ತನಂತೆ. ಆದ್ದರಿಂದ ಈಗಲೂ ಸಹಾ ಈ ಹಬ್ಬವನ್ನು ಹಿಂದೂಗಳು ವಿಧಿವತ್ತಾಗಿ ಆಚರಿಸುತ್ತಾ ಬರುತ್ತಾರೆ. ದೀಪಾವಳಿ ಹಬ್ಬದ ಮೊದಲನೆಯ ದಿವಸ ಅಂದರೆ ಅಮವಾಸ್ಯೆಯ ದಿನ ಮನೆಯ ಯಜಮಾನ ಬೆಳಿಗ್ಯೆ ಫಲಹಾರದ ನಂತರ ಹೋಗಿ ಒಂದು ಹಾಲೆ ಮರದ 4 ಕವಚ ಮತ್ತು ಸೊಪ್ಪು ಇರುವಂತ ಕಂಬಗಳನ್ನು ತಂದು ಮನೆಯ ಮುಂಭಾಗ ಅಂಗಳದಲ್ಲಿ ನೆಡುವನು. ನಂತರ ಆ ಕಂಬಕ್ಕೆ ಹೂಮಾಲೆ, ಭತ್ತದ ತೆನೆ, ಎಲೆ ಅಡಿಕೆ, ಹಿಂಗಾರಗಳಿಂದ ಸಿಂಗರಿಸಿ ಈ ಕಂಬಗಳನ್ನು ಹೆಣ್ಣು ಗಂಡು ಎಂದು ಸಂಕಲ್ಪಿಸುವರು.

ಸಾಯಂಕಾಲದ ಸಮಯ ಈ ಕಂಬಗಳ ಮುಂಭಾಗ ಸಗಣಿಯಿಂದ ಸ್ವಚ್ಛಪಡಿಸಿ, ಒಂದು ಮಣೆ ಇಟ್ಟು ನಂತರ ಪ್ರಥಮ ದಿನ ಅವಲಕ್ಕಿ, ಬಾಳೆಹಣ್ಣು, ತೆಂಗಿನಕಾಯಿ ಬಳಸಿ ಕಂಬಗಳ ಮೇಲೆ ದೀಪ ಹಚ್ಚಿಟ್ಟು, ಬಾಳೆಲೆಯ ತುದಿಯಲ್ಲಿ ಒಂದು ಬತ್ತಿಯನ್ನು ಕತ್ತಿಸಿ ಇಡುವರು. ನಂತರ ಬೆಳ್ತಿಗೆ ಅಕ್ಕಿ ಹಿಡಿದು ಮನೆಯ ಯಜಮಾನರು ಮತ್ತು ಮಕ್ಕಳು "ಬಲಿಯೇಂದ್ರ ಬಲಿಯೇಂದ್ರ ಹರಿಯೇ ಹರಿ ಕೂ" ಎಂದು ಅಕ್ಕಿ ಹಾಕುತ್ತಾ ಮೂರು ಸಲ ಕೂಗಿ ಹೇಳಿ ಕೈಮುಗಿದು ಮನೆಗೆ ಬರುತ್ತಾರೆ. ಈ ಸಂದರ್ಭದಲ್ಲಿ ಮನೆಯ ಸುತ್ತಲೂ ದೀಪಗಳನ್ನು ಹಚ್ಚಿಡುವರು. ಮಕ್ಕಳು ಪಟಾಕಿಗಳನ್ನು ಹೊಡೆಸುವರು. ಕೆಲವು ಕಡೆಗಳಲ್ಲಿ ನೂರೊಂದು ಬತ್ತಿಗಳನ್ನು ಕತ್ತಿಸಿಟ್ಟು 'ತುಳು ಪಾಡ್ದನ' ಹೇಳುವರು 'ಪಾಡ್ದನ' ಸಂಪೂರ್ಣವಾಗಿ ಮುಗಿಯುವ ಕೊನೆಯಲ್ಲಿ ಕಂಬ 'ಗಡಗಡ' ನಡುಗುವುದೆಂದು ಹಿರಿಯರ ವಾಡಿಕೆ. ಇದೇ ಬಲಿಯೇಂದ್ರನೆಂಬ ಗ್ರಹಿಕೆಯನ್ನು ಕಂಬಗಳಲ್ಲಿ ನಂಬಿಕೆ ಇಡುವರು.

ಸ್ವಲ್ಪ ಸಮಯದ ನಂತರ ಮಣೆಯಲ್ಲಿರಿಸಿದ ಅವಲಕ್ಕಿ, ಬಾಳೆಹಣ್ಣು ಮತ್ತು ತೆಂಗಿನಕಾಯಿಗಳನ್ನು ತೆಗೆದು ಬೇರೆ ಅವಲಕ್ಕಿ ಸೇರಿಸಿ ಅದರ ಪಾಕ ಮಾಡಿ ಸತ್ತವರಿಗೆ ಇಡುವಂತೆ ಕ್ರಮ ಮಾಡುತ್ತಾರೆ. ಇದಕ್ಕೆ ತುಳುವಿನಲ್ಲಿ ಅವಲು ಹಾಕುವುದು ಎನ್ನುವರು. ಸತ್ತವರು ಹೆಣ್ಣುಜನರಾದರೆ. "ಅಮವಾಸ್ಯೆ ಬೆಳಿಗ್ಯೆಯೂ ಗಂಡು ಜನರಾದರೆ ಪಾಡ್ಯದ ದಿನ ಅವಲು ಹಾಕುವ ಸಂಪ್ರದಾಯವಿದೆ.

ಈ ಕ್ರಮಕ್ಕೆ ಊರಿನವರು, ಬಳಗದವರು, ನೆಂಟರು ಅವಲಕ್ಕಿ, ತೆಂಗಿನಕಾಯಿ, ಬಾಳೆಹಣ್ಣು ತೆಗೆದುಕೊಂಡು ಹೋಗಿ 'ಅಗಲಿಗೆ' ಹಾಕಿ ಕೈಮುಗಿದು ಊಟ ಮಾಡಿ ಹಿಂತಿರುಗುವರು. ಪೂಜೆಯ ಎರಡನೆ ದಿವಸ ಕಂಬಕ್ಕೆ ರಾತ್ರೆ ಬೆಳ್ತಿಗೆ ಅಕ್ಕಿ, ತೆಂಗಿನಕಾಯಿ, ಸೌತೆಕಾಯಿ ಅಥವ ಬೆಳೆದ ತರಕಾರಿ ವಸ್ತುಗಳನ್ನು ಇಟ್ಟು ದೀಪ ಹಚ್ಚಿ ಮೊದಲಿನ ದಿವಸ ಹೇಳಿದಂತೆ ಹೇಳುವರು. ಹೀಗೆ ಮೂರು ದಿನ ರಾತ್ರಿ ಆಚರಿಸಿ ನಾಲ್ಕನೆಯ ದಿನ ಪ್ರಾತಃ ಕಾಲ ಕಂಬಗಳನ್ನು ಮರದ ಬುಡದಲ್ಲಿ ನೀರು ಇರುವ ಸ್ಥಳವನ್ನು ಆರಿಸಿಕೊಂಡು ಹೋಗಿ ಇಡುವರು. ಮೂರನೆಯ ದಿನ ಲಕ್ಷ್ಮೀಪೂಜೆ, ಗೋಪೂಜೆ ಮಾಡುವರು.

ಗೋಪೂಜೆ ದಿನ ಗೋವುಗಳನ್ನು ಸ್ನಾನ ಮಾಡಿಸಿ, ಮೈ ತೊಳೆದು ಗಂಧದ ತಿಲಕ ಹಚ್ಚಿ ಕುತ್ತಿಗೆಗೆ ಹೂಮಾಲೆ ಹಾಕಿ ದನಕ ಕೊಟ್ಟಿಗೆಯ ಮುಂಭಾಗ ದೀಪ ಹಚ್ಚಿಟ್ಟು, ಮನೆಯಲಿ ಮಾಡಿದ ಭಕ್ಷ್ಯಭೋಜನಗಳನ್ನು ಗೋವುಗಳಿಗೆ ಕೊಡುತ್ತಾರೆ. ಹೀಗೆ ಅಮಾವಾಸ್ಯೆ, ಪಾಡ್ಯ, ಬಿದಿಗೆ, ಈ ಮೂರು ದಿವಸಗಳು ಸರ್ವಸಾಧಾರಣ ಎಲ್ಲರ ಮನೆಯಲ್ಲಿ ವಿಶೇಷ ಅಡಿಗೆ ಆಡಂಬರ ಮಾಡುವುದಲ್ಲದೆ ಬೀಗರನ್ನು ಕರೆಯಿಸಿಕೊಂಡು ಹಬ್ಬವನ್ನು ಆಚರಿಸಿ ಸಂತೋಷಪಡುವರು. ಮಕ್ಕಳು ಪಟಾಕಿ ಮಳೆ ಸುರಿಸುವರು. ಹೊಸ ಬಟ್ಟೆ ಧರಿಸುವರು.

ಬಲಿರಾಯನ ಕಾಲದಲ್ಲಿ ಬರಗಾಲವಿರಲಿಲ್ಲವೆಂತಲೂ ಎಲ್ಲರ ನಂಬಿಕೆ. ಆತನ ಕಾಲದಲ್ಲಿ ಭತ್ತವನ್ನು ಬಿತ್ತಿದಲ್ಲಿ ಅಕ್ಕಿಯನ್ನು ಕೊಯ್ಯುತ್ತಿದ್ದರಂತೆ, ಅಕ್ಕಿಯನ್ನು ಬಿತ್ತಿದಲ್ಲಿ ಭತ್ತವನ್ನು ಕೊಯುತ್ತಿದ್ದರೆಂಬ ವಾಡಿಕೆ ಇದೆ. ಇಂತಹ ಪವಿತ್ರವಾದ ಮತ್ತು ಸಂಸ್ಕೃತಿಯನ್ನು ಭೂಮಿ ಪುತ್ರರಾದ ಗೌಡರು ಪಾಲಿಸಿ ಪೂಜಿಸುತ್ತಿರುವುದು ನಿಜಕ್ಕೂ ಗೌಡರಿಗೆ ಹೆಮ್ಮೆಯ ವಿಚಾರ ವಾಗಿದೆ. ಈ ಬಗ್ಗೆ ಅರಿವಿಲ್ಲದ ಗೌಡರೆ ಹೆಚ್ಚೆಂದರೆ ತಪ್ಪಲ್ಲ.

ಚಂದ್ರಶೇಖರ ಬಿ. ಬಿ. , ಭಾಗಮಂಡಲ, ಕೊಡಗು

## ನಿಧನ

ಭಾಗಮಂಡಲ ನಾಡು ಚೇರಂಗಾಲ ಗ್ರಾಮದ ಶ್ರೀ **ಪೆರಬಾಯಿ ಗೋಪಾಲನವರು**. ದಿನಾಂಕ 19-10-2001ರಂದು ನಿಧನರಾದರು. ಶ್ರೀಯುತರಿಗೆ 86 ವರ್ಷ ಪ್ರಾಯವಾಗಿದ್ದು ಪತ್ನಿ, ನಾಲ್ವರು ಗಂಡು ಮಕ್ಕಳು ಹಾಗೂ ಒಬ್ಬ ಪುತ್ರಿ ಮತ್ತು ಅಪಾರ ಬಂಧುವರ್ಗವನ್ನು ಅಗಲಿದ್ದಾರೆ. ದಿವಂಗತರು ಸಮಾಜ ಸೇವಕರಾಗಿಯೂ ದುಡಿದಿರುವುದಲ್ಲದೆ ಭಾಗಮಂಡಲ ನಾಡಿನ ವಿವಿಧ ಸಂಘ ಸಂಸ್ಥೆಗಳಲ್ಲಿ ಸಹ ದುಡಿದಿರುತ್ತಾರೆ.

ವಿ. ಜೆ. ಸತ್ಯಮೂರ್ತಿ, ಸಿದ್ದಾಪುರ

**ಪತ್ರಿಕೆ ನಡೆಯಿಸಲು ಆಗಿಂದಾಗ್ಗೆ ನಿರಂತರ ನವೀಕರಣ ಆಗುತ್ತಿರಬೇಕು.**

# ಮತಾಂತರ ಪಿಡುಗು-ಪರಿಹಾರವೇನು?

ಇತ್ತೀಚಿನ ದಿನಗಳಲ್ಲಿ ಯುವ ಜನಾಂಗ ತಮ್ಮ ಮತ, ಧರ್ಮಗಳನ್ನು ಬಿಟ್ಟು, ಆಕರ್ಷಿತರಾಗುತ್ತಿರುವುದು, ಮತಾಂತರ ಗೊಳ್ಳುತ್ತಿರುವುದು ಸುದ್ದಿಯಾಗುತ್ತಿದೆ. ಇದಕ್ಕೆ ಕಾರಣಗಳೇನು ಮತ್ತು ಪರಿಹಾರವೇನು ಎಂಬುದರ ಬಗ್ಗೆ ನಮ್ಮ ಸಮಾಜವು ಚಿಂತಿಸುವಂತಾಗಿದೆ.

ಆಧ್ಯಾತ್ಮಿಕತೆಯ ಮೂಲಕ ಸಮಾಜದ ಶುದ್ಧೀಕರಣಕ್ಕೆ ಪ್ರಯತ್ನಿಸಿ ಸಾಕಷ್ಟು ಯಶಸ್ವಿಯಾದ ಸ್ವಾಮಿ ವಿವೇಕಾನಂದರು ವಿಶ್ವಮಟ್ಟದ ಪ್ರಚಾರಕರು. ಅವರು ಸಮಾಜದಲ್ಲಿನ ಅಸಹಾಯಕರು, ನೊಂದವರು ಮತ್ತು ದೀನರ ಧ್ವನಿಯಾಗಿ ಜಾತ್ಯಾತೀತವಾಗಿ ದುಡಿದವರು. ಅವರು ಹುಟ್ಟು ಹಾಕಿದ ಸಾಮಾಜಿಕ ಸುಧಾರಣ ಕೆಲಸವನ್ನು ಅವರ ನಂತರ ನಮ್ಮ ಹಿಂದೂ ಸಮಾಜವು ಸಮರ್ಪಕ ವಾಗಿ ಮುಂದುವರಿಸಿಕೊಂಡು ಬರುವಲ್ಲಿ ವಿಫಲವಾಯಿತು. ದೀನ ದಲಿತರ, ಅಸಹಾಯಕರ ಶೋಷಣೆನಿತ್ಯ ನಿರಂತರವಾಗಿದೆ.

ವಿವಿಧ ಧರ್ಮ, ಆಚಾರ ಮತ್ತು ಅಸಂಖ್ಯಾತ ನಾಮಗಳುಳ್ಳ ದೇವರ ನೆಲೆಯಾಗಿರುವ ಭಾರತ ದೇಶವು 'ವೈವಿಧ್ಯತೆಯಲ್ಲಿ' ಏಕತೆಯನ್ನು ಕಂಡುಕೊಂಡಿರುವ ರಾಷ್ಟ್ರ. ಅದೇ ರೀತಿ ಹಿಂದೂ ಸಮಾಜದಲ್ಲಿರುವ ಹಲವಾರು ಕೆಳಸ್ತರದ ಕುಲಸ್ತರು, ಮತಸ್ತರನ್ನು ಅವರುಗಳ ಆಚಾರ ವಿಚಾರಗಳನ್ನು ಹಿಂದೂ ಸಮಾಜವು ಸಮಾನತೆ ಹಾಗೂ ಪ್ರೀತಿ ವಿಶ್ವಾಸಗಳಿಂದ ಸ್ವೀಕರಿಸಿದರೆ ಅಂತಹವರಲ್ಲಿರುವ ಕೀಳರಿಮೆ, ನೋವುಗಳ ನಿವಾರಣೆಯಾಗಿ ಪರಸ್ಪರ ವಿಶ್ವಾಸ ಮೂಡುವದರೊಂದಿಗೆ ಹಿಂದೂ ಸಮಾಜವು ಸಂಪೂರ್ಣ ಐಕ್ಯತೆ ಯಿಂದಿರಲು ಸಾಧ್ಯವಾಗುತ್ತದೆ. ಈ ರೀತಿಯ ಕೆಲಸಗಳನ್ನು ಹಿಂದೂ ಸಂಘಟನೆಗಳು ದೃಢ ನಿರ್ಧಾರದಿಂದ ಕೈಗೊಳ್ಳಬೇಕೇ ಹೊರತು ಅಲ್ಲೊಂದು ಇಲ್ಲೊಂದು ಮತಾಂತರದ ಸುದ್ದಿಯಾದಾಗ ಮಾತ್ರ ಮುಂದೆ ಬಂದು ಹೋರಾಡುವುದರಿಂದ ಪ್ರಯೋಜನವಾಗಲಾರದು. ಇಂತಹ ಪಿಡುಗಿನ ಬೇರಿನ ಮೂಲಕ್ಕೇ ಕೈ ಹಾಕದಿದ್ದರೆ ಅದನ್ನು ಅಳಿಸುವುದಾದರೂ ಹೇಗೆ ಸಾಧ್ಯ? ಅಲ್ಲದೆ, ಮತಾಂತರವು ವ್ಯಕ್ತಿಯೋರ್ವನ ವ್ಯಕ್ತಿಗತವಾದಂತಹ ಸೂಕ್ಷ್ಮ ವಿಚಾರವೂ ಆಗಿರುವುದರಿಂದ ಇದರಲ್ಲಿ ಸರಕಾರವು ಅಸಹಾಯಕವಾಗುವುದು ಕಂಡು ಬರುತ್ತದೆ.

ಸಂವಿಧಾನ ಶಿಲ್ಪಿ ಡಾ. ಅಂಬೇಡ್ಕರ್ ಅವರೂ ಸಹ ತಮ್ಮ ವೈಯುಕ್ತಿಕ ಹಾಗೂ ಸಾಮಾಜಿಕ ಬದುಕಿನುದ್ದಕ್ಕೂ ಅಸಮಾನತೆ ಹಾಗೂ ಅಸ್ಪೃಶ್ಯತೆ ನಿವಾರಣೆಗಾಗಿ ಅವಿರತ ಹೋರಾಡಿದ್ದರೂ, ಸಂಪೂರ್ಣ ಸಫಲರಾದ ಕಾರಣ ನೊಂದು, ಬಳಲಿ ತಮ್ಮ ಇಳಿ ವಯಸ್ಸಿನಲ್ಲಿ ಸ್ವಇಚ್ಛೆಯಿಂದ ಹಿಂದೂ ಧರ್ಮವನ್ನು ತ್ಯಜಿಸಿ ಅವರಿಗೆ ಮೆಚ್ಚಿಗೆಯಾದಂತಹ ಅಹಿಂಸಾ ತತ್ವದ ಬೌದ್ಧ ಧರ್ಮವನ್ನು ಸ್ವೀಕರಿಸಿದರು ಎಂಬುವದು ಇಲ್ಲಿ ಉಲ್ಲೇಖನಾರ್ಹ. ಇವೆಲ್ಲವನ್ನು ಸಾಮಾಜಿಕ ದೃಷ್ಟಿಕೋನದಿಂದ ಗಮನಿಸಿದರೆ "ಮಾಡಿದ್ದುಣ್ಣೋ ಮಹಾರಾಯ" ಎಂಬ ಗಾದೆ ಮಾತು ಹಿಂದೂ ಸಮಾಜಕ್ಕೆ ಅನ್ವಯಿಸಬಹುದೇನೋ ಎನಿಸುತ್ತದೆ. ಆದ್ದರಿಂದ ಹಿಂದೂ ಸಂಘಟನೆಗಳು ತಮ್ಮನ್ನು ಹಿಂದೂಗಳೆಲ್ಲರ ಐಕ್ಯತೆಗಾಗಿ ಸಂಪೂರ್ಣವಾಗಿ ತೊಡಗಿಸಿ ಕೊಳ್ಳುವಂತಹವರನ್ನು ಸೇರಿಸಿಕೊಂಡು ನಿಸ್ವಾರ್ಥತೆ ಹಾಗೂದೃಢ ನಿರ್ಧಾರದಿಂದ ಕೆಲವೊಂದು ಸಕಾಲಿಕ ಹಾಗೂ ಕ್ರಾಂತಿಕಾರಕ ಕಾರ್ಯಕ್ರಮಗಳೊಂದಿಗೆ ತೊಡಗಿಸಿಕೊಂಡರೆ ಮತಾಂತರದ ಪಿಡುಗನ್ನು ಹತೋಟಿಯಲ್ಲಿಡಬಹುದೇನೊ?

ಕೇವಲ ದುರಾಸೆ, ಹಣ ಹಾಗೂ ಉದ್ಯೋಗದ ಕಾಲ್ಪನಿಕ ಆಮಿಷಕ್ಕೊಳಪಟ್ಟು ಮಾತೃಧರ್ಮವನ್ನು ತ್ಯಜಿಸಿದವರು ಕೊನೆಗೊಮ್ಮೆ ಪಾತಾಳಕ್ಕೆ ಕುಸಿಯುವುದರಲ್ಲಿ ಯಾವ ಸಂಶಯವಿಲ್ಲ. ಮಾತೃಧರ್ಮವೇ ಶ್ರೇಷ್ಠ ಧರ್ಮವೆಂಬುದರಲ್ಲಿ ಎರಡು ಮಾತಿಲ್ಲ.

– ಹೊಸೊಕ್ಲು ಎಂ. ದೇವಯ್ಯ, ಗುಡ್ಡೆ ಹೊಸೂರು

---

8ನೇ ಪುಟದಿಂದ

ಸುಶೀಲ ಉಲ್ಲಾಸ್, ಉಪಾಧ್ಯಕ್ಷೆಯಾಗಿ ಶ್ರೀಮತಿ ಬಡ್ಡನ ಲತಾ ಸಿದ್ಧಾರ್ಥ, ಕಾರ್ಯದರ್ಶಿಯಾಗಿ ಶ್ರೀಮತಿ ಸುಳ್ಯಕೋಡಿ ವೈಶಾಲಿ ಅಮರ್‌ನಾಥ್, ಖಜಾಂಜಿಯಾಗಿ ಶ್ರೀಮತಿ ಮೂಲೆಮಜಲು ಯಶೋಧಮ್ಮ ಚಿನ್ನಪ್ಪ, ಜಂಟಿ ಕಾರ್ಯದರ್ಶಿಯಾಗಿ ಶ್ರೀಮತಿ ಶೈಲಜಾ ಜನಾರ್ಧನ್ ಆಯ್ಕೆಯಾಗಿದ್ದಾರೆ.

ಈ ಮಹಾಸಭೆಯಲ್ಲಿ ಮುಖ್ಯ ಅತಿಥಿಯಾಗಿ ಆಗಮಿಸಿದ ಶ್ರೀ ನಂಬುಡಿ ತಮ್ಮಯ್ಯರವರು ಎಸ್.ಎಸ್.ಎಲ್.ಸಿ. ಹಾಗು ಪಿ.ಯು.ಸಿ. ವಿದ್ಯಾರ್ಥಿಗಳಿಗೆ ಅತೀ ಹೆಚ್ಚು ಅಂಕ ಗಳಿಸಿದವರಿಗೆ ತಲಾರೂ. 500 ನೀಡಿ ಸನ್ಮಾನಿಸಲಾಯಿತು. ಶ್ರೀಮತಿ ಪೋರೆಯನ ಜ್ಯೋತಿ ಕುಶಾಲಪ್ಪ ಕೊಡುಗೈ ನೀಡಿ ದಾನಿಗಳ ದೊಡ್ಡ ಪಟ್ಟಿಯನ್ನೆ ಓದಿ ಹೇಳಿದರು.

ಈ ಮೊದಲೇ ಹೇಳಿದ ಹಾಗೇ ಈ ಮೇಲಿನ ಸಮಾಜವು ತನ್ನ ವಿಶೇಷ ಕಾರ್ಯಕ್ರಮಗಳ ಮೂಲಕ ಬೆಂಗಳೂರು ಹಾಗು ಬೆಂಗಳೂರು ಸುತ್ತಮುತ್ತಲಿನಲ್ಲಿರುವ ನಮ್ಮ ಸಮಾಜದ ಬಂಧುಗಳನ್ನು ಒಂದು ವೇದಿಕೆಗೆ ತರುವಲ್ಲಿ ಅಪಾರ ಯಶಸ್ಸನ್ನು ಗಳಿಸಿದೆ. ಹೀಗಿರುವಾಗ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿರುವ ಎಲ್ಲಾ ಸಮಾಜಗಳೂ ಕೂಡ ಏಕೆ ಈ ರೀತಿಯ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಜನರೊಂದಿಗೆ ಸ್ಪಂದಿಸುತ್ತಿಲ್ಲ ಎಂಬ ಯಕ್ಷ ಪ್ರಶ್ನೆ ಸ್ವಾಭಾವಿಕವಾಗಿಯೇ ನಮ್ಮಲ್ಲಿ ಮೂಡುತ್ತದೆ. ಹಲವಾರು ವರ್ಷಗಳಿಂದ ಜನಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಬೆಂಗಳೂರಿನ ಈ ಸಮಾಜಕ್ಕೆ ನಮ್ಮ ಬಂಧುಗಳ ಸಹಕಾರ ಇನ್ನೂ ಹೆಚ್ಚು ಸಿಗಲಿ ಹಾಗು ಇವರು ಖರೀದಿಸಿದ ಹೊಸ ನಿವೇಶನದಲ್ಲಿ ಒಂದು ಭವ್ಯವಾದ ಹಾಗು ಸುಸಜ್ಜಿತವಾದ ಸಭಾಂಗಣ ಆದಷ್ಟು ಶೀಘ್ರವಾಗಿ ನಿರ್ಮಾಣವಾಗಲಿ ಎಂಬ ಆಕಾಂಕ್ಷೆಯನ್ನು ವ್ಯಕ್ತ ಪಡಿಸುತ್ತಾ ಈ ಸಮಾಜ ಸಮರ್ಪಕವಾಗಿ ಆಡಳಿತ ನಡೆಸಲಿ ಎಂದು ಅಭಿನಂದನೆಯನ್ನು ಸಲ್ಲಿಸುತ್ತೇನೆ.

ವರದಿ : ಕುಮಾರಿ ಮೂಲೆ ಮಜಲು ರಮ್ಯ ಚಿನ್ನಪ್ಪ
ಬೆಂಗಳೂರು

# ಪತ್ರ ವಿಭಾಗ :



**ಮಾನ್ಯರೆ, ಕೊಡಗು ಸಂಗಾತಿ ನಾಲ್ಕುಮಡಿಯಾಗಿ ಬೆಳೆಯಲಿ**

ಕೊಡಗು ಸಂಗಾತಿ ಪತ್ರಿಕೆಗೆ ಸುಮಾರು ಎರಡು ಸಾವಿರ ಚಂದಾದಾರರಲ್ಲಿ ಕೇವಲ ಒಂದು ಸಾವಿರದಷ್ಟು ಮಾತ್ರ ನವೀಕರಣವಾಗುತ್ತಿದೆಯೆಂದು ತಿಳಿದು ಬೇಸರವಾಗುತ್ತಿದೆ.

ಸಂಗಾತಿಯವರು ಚಂದಾದಾರರನ್ನು ನವೀಕರಿಸಲು ಆಗಾಗ ವಿನಂತಿಸುತ್ತಿರುವರು. ನಮ್ಮ ಅನುಕೂಲಕ್ಕಾಗಿ ಕೆಲವೆಡೆ ನವೀಕರಣ ಮತ್ತು ತಿಳುವಳಿಕೆ ಕೇಂದ್ರಗಳನ್ನು ತೆರೆದಿರುವರು. ಖುದ್ದಾಗಿಯೂ ಸಂಪರ್ಕಿಸುವರು. ಇಷ್ಟಾದರೂ ಫಲಿತಾಂಶ ಬಹಳ ಕಡಿಮೆ. ಕಾರ್ಯಕ್ರಮ ನೆಡದ ಸ್ಥಳದಲ್ಲಿ ನವೀಕರಿಸುವ ಸ್ವಭಾವ ನಮಲ್ಲಿ ಬಹಳ ಕಮ್ಮಿಯೆಂದೆ ಹೇಳಬಹುದು. ಅಂದವಾದ ಕಾಗದ, ಅಚ್ಚುಕಟ್ಟಾದ ಮುದ್ರಣ, ಅಚ್ಚುಮೆಚ್ಚಿನ ವಿಷಯಗಳಿಂದ ಕೂಡಿ ಕೊಡಗು ಸಂಗಾತಿ ಪತ್ರಿಕೆಯು ತಪ್ಪದೇ ಹೊರಬರುತ್ತಿದೆ.

ಯಾವ ತಿಂಗಳಲ್ಲಿ ವಾರ್ಷಿಕ ಚಂದಾದಾರರು ನವೀಕರಿಸ ಬೇಕೆಂದು ಭವಿಷ್ಯ ಮರೆತು ಹೋಗಬಹುದು. ಈ ಮರುವಿನಿಂದ ಎಚ್ಚರಿಸಲು ಒಂದು ಉಪಾಯವಿದೆ. ಪ್ರತಿ ವರ್ಷ ಜನವರಿ ತಿಂಗಳಲ್ಲಿ ನಾವು ನಮ್ಮ ಆಸ್ತಿಯ ಕಂದಾಯ ಕಟ್ಟುವುದಿಲ್ಲವೋ? ಅದೇ ರೀತಿಯಲ್ಲಿ ಇದನ್ನೂ ಕಟ್ಟಿದರಾಯಿತು. ಸಂಗಾತಿ ಕಛೇರಿ ಸರಿಯಾದ ಲೆಕ್ಕ ಇಟ್ಟಿರುತ್ತದೆ. ನಮಗೆ'ವರೀಸ್' ಬೇಡ, ಅಲ್ಲವೇ?

'ಸಂಗಾತಿ ಪತ್ರಿಕೆಯವರು ಶಕತ್ತ್ ದುಡ್ಡು ಮಾಡಲು ಶುರು ಮಾಡಿರುವರು, ಜನ ಸೇವೆ ಮಾಡುತ್ತಿಲ್ಲ"ದೂಸಿಸುವುದು, ದೂರವಾಣಿಯ ಮುಖಾಂತರ ಬಯ್ಯುವುದು, ಇವೆಲ್ಲ ಸರಿಯಲ್ಲ. ಅವರ ತಪ್ಪುಗಳಿದ್ದರೆ ಅವುಗಳನ್ನು ನಾವು ಖಂಡಿಸಬೇಕು, ಸರಿಪಡಿಸಬೇಕು. ಹಿಂದಿನಿಂದ ಬಯ್ಯುವುದಲ್ಲ. ಲಾಭ, ದುಡ್ಡು ಮಾಡಿದರೆ ಅದು ಅವರಿಗೆ. ಅವರು ಕಷ್ಟಪಡುವುದಿಲ್ಲವೇನು? ನಾವು ಕಟ್ಟುವ ಚಂದಕ್ಕೆ ನಮಗೆ ಬರುವ ಪತ್ರಿಕೆಯಿಂದ ತೃಪ್ತಿ ಪಡಬೇಕು. ಒಂದು ವೇಲೆ ಅವರಿಗೆ ಅತೀ ಲಾಭ ಬಂದಲ್ಲಿ (ಈಗ ನಡೆಯುತ್ತಿರುವು ನಷ್ಟದಲ್ಲೆಂದು ತಿಳಿದೆನು) ಈ ಪತ್ರಿಕೆಯನ್ನು ಇನ್ನೂ ಒಳ್ಳೆದು ರೀತಿಯಲ್ಲಿ ಅಥವಾ ಬೇರೆ ಯಾವುದಾದರೂ ನಮ್ಮ ಜನಾಂಗಕ್ಕೆ, ಸಾರ್ವಜನಿಕರಿಗೆ ಉಪಯೋಗ ಬರುವ ಕೆಲಸವನ್ನು ಪ್ರಾರಂಭಿಸತಿಲ್ಲವೇನು? ಇವರನ್ನು ನನಗೆ1970ರಿಂದಲೇ ಪರಿಚಯವಿದೆ. ಮೋಸ ಮಾಡಲಾರರೆಂಬ ದೃಢ ನಂಬಿಕೆ ನನಗಿದೆ. ಹಾಗೂ ಸಾಕಷ್ಟು ಜನಾಂಗಕ್ಕಾಗಿ ಜನಪರ ಕೆಲಸಗಳನ್ನು ಈಗಾಗಲೇ ಮಾಡುತ್ತಿಲ್ಲವೇನು?

ಸಂಗಾತಿ ಪತ್ರಿಕೆಯವರೆ, ಸತ್ಯದಿಂದ ಜನಾಂಗದ ಮಮತೆಯಿಂದ ಮತ್ತು ಧೈರ್ಯದಿಂದ ಧರ್ಮದಿಂದ ನಿಮ್ಮ ಕೆಲಸವನ್ನು ನೀವು ಮುಂದುವರಿಸಿ. ನಮ್ಮವರಿಗೆ ಇದೆಲ್ಲಾ ಅರ್ಥವಾಗಲು ಹಲವಾರು ದಶಕಗಳೇ ಬೇಕು.-ನಮ್ಮ ಜನಾಂಗದ ಏಕೈಕ ಪತ್ರಿಕೆ ನಾಲ್ಕುಮಡಿಯಾಗಿ ಬೆಳೆಯಬೇಕು. ಎಂದೆಂದಿಗೂ ಉಳಿಸಬೇಕು ಹಿತೈಷಿಗಳ ಪ್ರೋತ್ಸಾಹ ಮತ್ತು ದೇವರ ಕೃಪೆಯಿಂದ ಮುನ್ನಡೆಯಿರಿ. ಜಯ ಖಂಡಿತವಿದೆ.

ಪೂಜಾರಿ ಪೂವಯ್ಯ, ಬೆಂಗಳೂರು

**ಸಂಪಾದಕರಿಗೆ**

ಜನಾಂಗದ ಅಭಿವೃದ್ಧಿಗೆ ತಾವು ತಮ್ಮ ಪತ್ರಿಕೆ ಮೂಲಕ ಪ್ರೋತ್ಸಾಹ ಕೊಡುತ್ತಿರುವುದು ಬಹಳ ಸಂತಸ. ಶೈಕ್ಷಣಿಕವಾಗಿ ಮುಂದುವರಿಯಲು ನಿಮ್ಮ ಪತ್ರಿಕೆ ದಾರಿದೀಪವಾಗಬೇಕು. ತಾವು ಶ್ರದ್ಧೆಯಿಂದ ಮಾಡುತ್ತಿರುವ ಈಕಾರ್ಯ ಸುಗಮವಾಗಿ ಮುಂದುವರಿಯಲಿ.

'ಶ್ರದ್ಧೆಯಿರುವುದೇ ನಾಕ, ಅಶ್ರದ್ಧೆಯೇ ನರಕ, ಶ್ರದ್ಧೆಯಿದ್ದರೆ ಕೋಟಿದೇವರೆಮಗೆ ಆಳಯ್ಯ, ಮನವನೇ ದೇವತೆಯು, ನರನೇ ನಾರಾಯಣನು ನಮ್ಮ ವಿಷ್ಯಕ್ಕೆ ನಾವೇ ನಿರುಪಮ ಅದ್ಭುತವಯ್ಯ, ಎಂದು ಕುವೆಂಪುರವರ ನಾಲ್‌ನುಡಿಗಳನ್ನು ನೆನೆಯುತ್ತಾ 'ಕೊಡಗು ಸಂಗಾತಿ' ಎಲ್ಲರ ಮೆಚ್ಚುಗೆಯ ಪತ್ರಿಕೆಯಾಗಲಿ ಎಂದು ಹಾರೈಸುತ್ತೇನೆ.

ಡಾ. ಗುಡ್ಡೆಮನೆ ಪಿ. ಚಿನ್ನಯ್ಯ
ಬೆಂಗಳೂರು.

---

## ಯಾರಿವಳು?

ಹುಟ್ಟಿ ಹರಿವಳು ಕಾವೇರಿ ತಲಕಾವೇರಿಯಲಿ
ನಲಿ-ನಲಿದಾಡುವಳು ಗಿರಿ-ಶಿಖರಗಳ ಕಣಿವೆಯಲಿ !
ಹಾವು ಹರಿದಾಡಿದಂಗೆ ಹೂ ಬಳ್ಳಿಯ ಕಾನನದಲಿ
ಓಡೋಡಿ ಬರುತಿಹಳು ಅತಿ ಆನಂದದಲಿ !!
ಬಾಲ್ಯವ ಕಳೆದು ದೊಡ್ಡವಳಾಗಿಹಳು ಹರಿ-ಹರಯದಲಿ
ಹಸಿ ಯೌವನವೀಗ ನೋಡಿದರೆ ಸುಂದರ ಮೈಸೂರಲಿ !
ಕೈಬೀಸಿ ಕರೆವಳು ಸೋದರಿಯ ಪ್ರೀತಿಯಲಿ
ಅಪ್ಪಿಕೊಳ್ಳುವಳಾಕೆಯ ತಿರುಮ ಕೂಡಲಿನಲಿ !!
ಸೋದರಿಯಿಬ್ಬರೂ ಸಾಗುವರೊಂದಾಗಿ ಜೊತೆಯಲಿ
ಖಗ-ಮೃಗಗಳ ದಾಹ ನೀಗಿರುವ ದಯೆಯಲ್ಲಿ !
ತಡೆದರಿವರನ್ನು ಮುಂದೆ ಮೆಟ್ಟೂರಿನಲ್ಲಿ
ಎದುರುವರೀ ಕನ್ನಡಿಗರು? ಜಿಗಿದರಾಚೆಗೆ ಶೌರ್ಯದಲಿ !!
ಹಿಂತಿರುಗಿ ನೋಡಿದರು ತಾವು ಬಂದ ಹಾದಿಯನು ನಿಂತು ಅಲ್ಲಿ
ಕಾಣಿಸಿತಲ್ಲಿಗೂ ಸುಂದರ ಕನ್ನಡ ನಾಡು ಬೆಳ್ಳಿ ಬೆಳಕಂದದಲಿ
ಬಾಲ್ಯ - ಯೌವ್ವನವ ಮೆಲಕು ಹಾಕುತ ಸಾಗಿದರು
ಮುಂದೆ... ಮುಂದೆ
ವಿಲೀನವಾದರು ಒಂದಾಗಿ ಬಂಗಾಳ ಕೊಲ್ಲಿಯಲಿ !!!

- ಹೊಸೊಕ್ಲು ರಾಧಮಣಿ ಪೊನ್ನಪ್ಪ,
ಮೈಸೂರು - 11

---

# ಆರೋಗ್ಯಕ್ಕೆ ಮನೆಗೊಂದು ನುಗ್ಗೇಮರ ಬೇಕು

ಚಿತ್ರ : ಶಂಕರನ ಬಸಪ್ಪ



ನುಗ್ಗೆ ಗಿಡವು ಸ್ಥಳೀಯ ಬಹುವಾರ್ಷಿಕ ತರಕಾರಿ ಬೆಳೆಯಾಗಿದ್ದು, ಇದರ ಪ್ರತಿಯೊಂದು ಅಂಗವು ಎಲೆ, ಹೂವು, ಬೇರು ಮತ್ತು ತೋಳು ಅತ್ಯಂತ ಪೌಷ್ಟಿಕತೆ ಮಹತ್ವ ಹೊಂದಿದೆ. ನುಗ್ಗೆ ಸೊಪ್ಪಿನಲ್ಲಿ ಹೇರಳವಾದ 'ಸಿ' ಅನ್ನಾಂಗ, ಕ್ಯಾರೋಟಿನ್ ಇದ್ದು ಕಬ್ಬಿಣ, ರಂಜಕ, ಸುಣ್ಣದ ಅಂಶಗಳು ಸಾಕಷ್ಟು ಪ್ರಮಾಣ ದಲ್ಲಿರುತ್ತವೆ. ನುಗ್ಗೆಕಾಯಿಯ ರಂಜಕ ಹಾಗೂ ಕ್ಯಾರೋಟಿನ್ ಒದಗಿಸುವುದರ ಜೊತೆಗೆ ತಯಾರಿಸಿದ ಪದಾರ್ಥದ ರುಚಿ, ಸುವಾಸನೆಯನ್ನು ಸಹ ಹೆಚ್ಚಿಸುವಲ್ಲಿ ನಮಗೆ ಸಹಕಾರಿಯಾಗಿದೆ.

ಉಪಯೋಗಗಳು

ಎಲೆಗಳು : ರಕ್ತದ ಒತ್ತಡ : ಹಣ್ಣಾಗಿ ಹಳದಿ ಬಣ್ಣಕೆ ತಿರುಗಿದ ಎಲೆಗಳ ರಸವನ್ನು ನಿಗದಿತ ಪ್ರಮಾಣದಲ್ಲಿ ಸೇವಿಸಿದರೆ ರಕ್ತದ ಒತ್ತಡವನ್ನು ಕಡಿಮೆ ಮಾಡಬಹುದಾಗಿದೆ.

**ಅಸ್ತಮ ಮತ್ತು ಕ್ಷಯರೋಗ (ಟಿ. ಬಿ.) :** ಎಲೆಗಳಿಂದ ಶೇಖರಿಸಿದ ರಸದಲ್ಲಿ ಉಪ್ಪು, ಕರಿಮೆಣಸು, ನಿಗದಿತ ಪ್ರಮಾಣದಲ್ಲಿ ಬೆರೆಸಿ ಸೇವಿಸಿದರೆ ಅಸ್ತಮ ಮತ್ತು ಕ್ಷಯ ರೋಗವನ್ನು ಸ್ವಲ್ಪಮಟ್ಟಿಗೆ ನಿಯಂತ್ರಿಸಬಹುದಾಗಿದೆ.

**ಎದೆ ಕುತ್ತಿಗೆ ಮತ್ತು ಚರ್ಮ ಸೋಂಕುಗಳು :** ಎಲೆಗಳು ಅಂಟಿಬಯಾಟಿಕ್ ಲಕ್ಷಣಗಳನ್ನು ಹೊಂದಿರುವುದರಿಂದ, ಇದರ ರಸವನ್ನು ಶರೀರಕ್ಕೆ ಉಪಚಾರ ಮಾಡುವುದರಿಂದ ಚರ್ಮ ಸೋಂಕುಗಳು, ಮುಖದ ಮೊಡವೆಗಳು ಇತ್ಯಾದಿಗಳನ್ನು ನಿವಾರಿಸಬಹುದಾಗಿದೆ.

ಅನಿಮಿಯ : ಎಲೆಗಳಲ್ಲಿ 'ಕಬ್ಬಿಣ' ಅಂಶ ಹೇರಳವಾಗಿರುವುದರಿಂದ ರಸದ ಜೊತೆಗೆ ಬೆಲ್ಲದ ದ್ರಾವಣವನ್ನು ಬೆರೆಸಿ ಕೆಂಪು ರಕ್ತ ಕಣಗಳ ವೃದ್ಧಿಯನ್ನು ಹೆಚ್ಚಿಸಬಹುದಾಗಿದೆ ಮತ್ತುಮಹಿಳೆಯಲ್ಲಿ ತಿಂಗಳ ಸ್ರಾವದಿಂದ ಆಗುವ ಬಲಹೀನತೆ ಯನ್ನು ಸಹ ಹೋಗಲಾಡಿಸಲು ಸಹಕಾರಿಯಾಗಿದೆ.

**ಮೂತ್ರ ಸಂಬಂಧಿತ ತೊಂದರೆಗಳು :** ಅತಿ ಮೂತ್ರ ಅಥವಾ ಮಿತ್ರ ಮೂತ್ರ ವಿಸರ್ಜನೆ ತೊಂದರೆಗಳನ್ನು ಎಲೆಗಳ ರಸದಿಂದ ಮತ್ತು ಇತರೆ ಔಷಧಿಗಳೊಂದಿಗೆ ಬೆರೆಸಿ ಸೇವಿಸಿದಾಗ ಈ ತೊಂದರೆಗಳನ್ನು ತಡೆಗಟ್ಟಬಹುದಾಗಿದೆ.

**ಅಜೀರ್ಣ :** ಎಲೆಗಳಿಂದ ಶೇಖರಿಸಿದ ರಸದ ಜೊತೆಗೆ ಜೇನುತುಪ್ಪ ಮತ್ತು ತೆಂಗಿನ ಎಳನೀರನ್ನು ತಕ್ಕ ಪ್ರಮಾಣದಲ್ಲಿ ಸೇವಿಸಿದರೆ ಅಜೀರ್ಣ, ಡಿಸೆಂಟ್ರಿ ಮುಂತಾದ ತೊಂದರೆಗಳನ್ನು ನಿವಾರಿಸಬಹುದಾಗಿದೆ.

**ಶರೀರದ ಹುಣ್ಣು ಮತ್ತು ದಂತರಕ್ತ ಸ್ರಾವ :** ಎಲೆಗಳಿಂದ ಶೇಖರಿಸಿದ ರಸವನ್ನು ಶರೀರದ ಹುಣ್ಣು ಗಾಯಗಳಿಗೆ ಉಪಚರಿಸಿದರೆ, ಗಾಯ, ಕಜ್ಜಿಗಳು ಬೇಗನೆ ವಾಸಿಯಾದ ಹಲವು ಉದಾಹರಣೆಗಳಿವೆ. ಇದೇ ರೀತಿ ಎಲೆ ರಸದ ಜೊತೆ ಅರಿಶಿಣ, ಬೆಳ್ಳುಳ್ಳಿ, ಮತ್ತು ಕರಿಮೆಣಸು ನಿಗದಿತ ಪ್ರಮಾಣದಲ್ಲಿ ಬೆರೆಸಿ ದಂತಗಳಿಗೆ ಉಪಚರಿಸಿದರೆ ದಂತಸ್ರಾವವನ್ನು ತಡೆಗಟ್ಟ ಬಹುದಾಗಿದೆ.

**ಬೇರು :** ಬಿಸಿ ನೀರಿನಲ್ಲಿ ಬೇಯಿಸಿ, ಬೇರಿನ ರಸ ದ್ರಾವಣವನ್ನು ಮೂಗುಗಾಯಗಳಿಗೆ ಅಥವಾ ಊತಗಳಿಗೆ ಉಪಚರಿಸುವುದರಿಂದ ಈ ತೊಂದರೆಗಳನ್ನು ನಿವಾರಿಸ ಬಹುದಾಗಿದೆ.

**ಹೂವು :** ಹೂವುಗಳಿಂದ ಶೇಖರಿಸಿದರಸ ನಿಗದಿತ ಪ್ರಮಾಣದಲ್ಲಿ ಹಾಲಿನೊಂದಿಗೆ ಬೆರೆಸಿ ಸೇವಿಸಿದಾಗ ಸ್ತ್ರೀ ಮತ್ತು ಪುರುಷರ ಲೈಂಗಿಕ ತೊಂದರೆಗಳನ್ನು ಸರಿಪಡಿಸುವಲ್ಲಿ ಸಹಕಾರಿಯಾಗಿದೆ.

**ರೆಂಬೆ :** ಸ್ವಚ್ಛವಾದ ತೊಳಿನಿಂದ ತಯಾರಿಸಿದ ಪುಡಿಯನ್ನು ನಿಗದಿತ ಪ್ರಮಾಣವನ್ನು ಜೇನುತುಪ್ಪದಲ್ಲಿ ಬೆರೆಸಿ ಸೆವಿಸಿದಾಗ ಸ್ತ್ರೀ ಮತ್ತು ಪುರುಷರ ಲೈಂಗಿಕ ತೊಂದರೆ ಮತ್ತು ನಪುಂಸಕತೆಯನ್ನು ಸರಿಪಡಿಸುವುದರ ಜೊತೆಗೆ ಈ ಪುಡಿಯಿಂದ ತಯಾರಿಸಿದ ಗುಳಿಗೆಗಳನ್ನು ಸೇವಿಸಿದಾಗಹೊಟ್ಟೆನೋವು, ಅಜೀರ್ಣ, ಡಿಸೆಂಟ್ರಿಗಳಂತಹ ತೊಂದರೆಗಳನ್ನು ನಿವಾರಿಸಬಹುದೆಂದು ವೈದ್ಯರು ಸಲಹೆ ನೀಡುತ್ತಿದ್ದಾರೆ.

ನಾವು ನುಗ್ಗೆ ಅಂಗಾಂಗಗಳನ್ನು ದೈನಂದಿನ ಜೀವನದಲ್ಲಿ ಉಪಯೋಗಿಸಿದಾಗ, ಬರುವ ಕಾಯಿಲೆಗಳನ್ನು ಬರದ ಹಾಗೆ ನಮ್ಮ ಕುಟುಂಬದವರನ್ನು ಆರೋಗ್ಯದಿಂದಿಡಲು ಸಹಕಾರಿಯಾಗಿದೆ.

ಆದ್ದರಿಂದ ಒಂದೇ ನುಗ್ಗೆಗಿಡ ಮನೆ ಅಂಗಳದಲ್ಲಿ ಬೆಳೆಸಿದರೆ ಅದು ಪುಟ್ಟ ವೈದ್ಯರಾಗಿ ಸಹಾಯ ಮಾಡಬಲ್ಲದು.

ಹಲವು ಹತ್ತು ಬೇನೆಗಳಿಗೆ 'ರಾಮಬಾಣ'ವಾಗುವ ಔಷಧೀಯ ಪರಿಣಾಮದ ನುಗ್ಗೇಮರ ಹಾಗೂ ನುಗ್ಗೆಕಾಯಿ ಕೃಷಿ ಕುರಿತು ಮೂಡಿಗೆರೆ 'ರೀಸರ್ಚ್ ರೀಜನಲ್ ಸ್ಟೇಷನ್'ನಲ್ಲಿ ಸಂಶೋಧನೆ ಮಾಡಿದ್ದಾರೆ.

ಎಚ್. ಎಸ್. ಸೂರ್ಯನಾರಾಯಣ

---

ಬೇಸಾಯ ಮಾಡಿದವ ಬೇಗ ಸಾಯ

---



## ಪುರಸ್ಕಾರ ಸಮಾರಂಭ

ರೋಟರಿ ಕ್ಲಬ್ ಮೈಸೂರು ಹಾಗೂ ಮೈಸೂರು ಜಿಲ್ಲಾ ಸಾಹಿತ್ಯ ಪರಿಷತ್ತು ಇದರ ಸಂಯುಕ್ತ ಆಶ್ರಯದಲ್ಲಿ ಶಿಕ್ಷಕರ ದಿನಾಚರಣೆ ಮತ್ತು "ಹೊಂಬೆಟ್ಟ" ಕೃತಿಯ ಚಿಂತನೆ ಸಮಾರಂಭದಲ್ಲಿ

**ಶ್ರೀಮತಿ ಕೆ. ಎ. ಮನೋರಮ,** ಎಂ. ಎ., ಬಿ. ಎಡ್.
ಮುಖ್ಯೋಪಾಧ್ಯಾಯಿನಿ, ಶಾಂತಲ ವಿದ್ಯಾಪೀಠ, ಮೈಸೂರು ಹಾಗೂ ಡೈರೆಕ್ಟರ್ ಮಹಿಳಾ ಕ್ಲಬ್, ಮೈಸೂರು

ಇವರು ಶಿಕ್ಷಣ ಕ್ಷೇತ್ರದಲ್ಲಿ ಹಾಗೂ ಉಚಿತ ಶಿಕ್ಷಣವನ್ನು ಬಡ ಹಿಂದುಳಿದ ಹೆಣ್ಣು ಮಕ್ಕಳಿಗೆ ಸಲ್ಲಿಸಿರುವ ಅನುಪಮ ಸೇವೆಯವನ್ನು ಸ್ಮರಿಸಿ ದಿನಾಂಕ 02-10-2001ರಲ್ಲಿ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಯವರ ಸಮ್ಮುಖದಲ್ಲಿ ರೋಟರಿ - **"ಸೋಂಪುರ ಬಸಪ್ಪ ಪ್ರಶಸ್ತಿ"** ನೀಡಿ ಗೌರವಿಸಲಾಗಿದೆ. ಇವರು ಲೇಟ್ ಕೈಬೀಲಿ ಅಯ್ಯಪ್ಪನವರ ಕೊನೆಯ ಪುತ್ರಿ, ಇವರ ಶಿಕ್ಷಣ ಕ್ಷೇತ್ರದ ಜೀವನವು ಇನ್ನು ಹೆಚ್ಚು ಪ್ರಜ್ವಲಿಸಲಿ ಎಂದು ಹಾರೈಸುವ :

**ಶಾಲೆಯ ಸಂಸ್ಥಾಪಕರಾದ :**
**ಶ್ರೀಮತಿ ಮತ್ತು ಶ್ರೀ ಶ್ರೀಕಾಂತ್‌ರವರು,**
**ಸಿಬ್ಬಂದಿವರ್ಗ**

ಪತಿ : **ಅಚ್ಚಪಟ್ಟಿರ ಪುಟ್ಟಪ್ಪ,** ☎ : 302991
ಮಕ್ಕಳು : **ರೇಷ್ಮ, ರಕ್ಷಿತ್**
ಮಾವ : **ಅಚ್ಚಪಟ್ಟಿರ ಈರಪ್ಪ, ಅಕ್ಕಯ್ಯ,**
ಭಾವಂದಿರು : **ಅಚ್ಚಪಟ್ಟಿರ ಗಣೇಶ, ಸಾವಿತ್ರಿ, ಮಕ್ಕಳು, ಅಚ್ಚಪಟ್ಟಿರ ಮುದ್ದಪ್ಪ, ಬಾಲಕೃಷ್ಣ**
ಅಕ್ಕ, ಭಾವ : **ಕುಯ್ಯಮುಡಿ ಕಮಲ ಪೊನ್ನಪ್ಪ, ತನುಜ ರವೀಂದ್ರ, ಯಶವಂತ್ ರೀತಾ,**
ಅಣ್ಣಂದಿರು : **ಕೈಬೀಲಿ ಚಂಗಪ್ಪ, ಸುಬ್ಬಯ್ಯ, ನಂದಗೋಪಾಲ ಹಾಗೂ ಮಕ್ಕಳು**

## ನಿವೇಶನ ಮಾರಾಟಕ್ಕಿದೆ

ಮೈಸೂರು ವಿಜಯನಗರದ ನಾಲ್ಕನೇ ಹಂತದಲ್ಲಿ 30" × 40" ಅಳತೆಯ ನಿವೇಶನ ಮಾರಾಟಕ್ಕಿದೆ. ಆಸಕ್ತರು ಕೂಡಲೇ ಈ ಕೆಳಗಿನ ದೂರವಾಣಿಯನ್ನು ಸಂಪರ್ಕಿಸಿ

☎ : 0821 - 474890, ಮೈಸೂರು

## 4ನೇ ವಾರ್ಷಿಕ ಸ್ಮರಣೆ



**ಜೈನೀರ ಚಂದ್ರಪ್ಪ,** ಹಾಸನ
ಜನನ : 30-3-1944 ಮರಣ : 25-10-1997

ನೀವು ನಮ್ಮನ್ನಗಲಿ ನಾಲ್ಕು ವರ್ಷ ಕಳೆದರು ನಿಮ್ಮ ಸವಿನೆನಪು ಸದಾ ನಮ್ಮಲ್ಲಿ ಹಚ್ಚ ಹಸುರಾಗಿದೆ. ನಿಮ್ಮ ಜೀವನದ ನಿಸ್ವಾರ್ಥ ನೆನಪುಗಳು, ಆದರ್ಶಗುಣಗಳು ನಮಗಿಂದು ಧೈರ್ಯದ ಆಸರೆಯಾಗಿದೆ. ನಿಮ್ಮ ಆತ್ಮಕ್ಕೆ ಚಿರಶಾಂತಿಯನ್ನು ನೀಡಲೆಂದು ಅನುದಿನವು ಪ್ರಾರ್ಥಿಸುತ್ತೇವೆ.

ಪತ್ನಿ : **ಶಾಂತಿ,**
ದೊಡ್ಡ ಮಗ : **ವೇಣು,** ಸೊಸೆ : **ಸುಮ ಮತ್ತು ಮೊಮ್ಮಗಳು, ಮೊಮ್ಮಗ**
ಸಣ್ಣ ಮಗ : **ಲೋಕೇಶ್, ಅಳಿಯ, ಮಗಳು ಹಾಗೂ ಮೊಮ್ಮಕ್ಕಳು**
ಪ್ರಕಟಣೆ : **ಜೈನೀರ ಪಾರ್ವತಿ (ಶಾಂತಿ),** ಹಾಸನ - 08172 / 61091

## ನಿಧನ



ದಿ. **ಚೆನ್ನಿ,** ಬೆಂಗಳೂರು
ಜನನ : 21-3-1948 ಮರಣ : 18-8-2001

ನೀವು ವಿದೇಶದಲ್ಲಿ 23 ವರ್ಷದಿಂದ ದುಡಿಯುತ್ತಿದ್ದು ತನ್ನ ಸೇವೆಯನ್ನು ಅಲ್ಲಿಗೆ ಪೂರ್ಣಗೊಳಿಸಿ ತನ್ನ ಸ್ವದೇಶಕ್ಕೆ ಹಿಂದಿರುಗಿ ಪತ್ನಿ ಮಕ್ಕಳು ಹಾಗೂ ಬಂಧು ಬಳಗದವರೊಡನೆ ಸೇರಿ ತನ್ನ ಬದುಕು ಹಾಗೂ ಇನ್ನುಳಿದ ಭವಿಷ್ಯವನ್ನು ನಿರೂಪಿಸುವ ಮೊದಲೇ ವಾಹನ ಅಪಘಾತವೊಂದರಲ್ಲಿ ಅಲ್ಲಿಯೇ ವಿಧಿವಶರಾದಿರಿ. ನಿಮ್ಮ ದಿವ್ಯಾತ್ಮಕ್ಕೆ ಆ ಪರಮಾತ್ಮನು ಅನುದಿನವು ಶಾಂತಿ ಕೋರಲೆಂದು ಪ್ರಾರ್ಥಿಸುವ

ದುಃಖತಪ್ತ ಪತ್ನಿ : **ತೆಕ್ಕಡೆ ಭಾಗೀರಥಿ,** ಮಗ : **ವಿನು,** ಮಗಳು : **ಅನುಷ**
ಲಿಂಗರಾಜಪುರ, ಬೆಂಗಳೂರು ☎ : 080 - 5460678

Reg. No. KA/SK/MYS-88 Registered : 10-01-96 TCI Kar. 09592

# ಗೌಡ ವಧು ವರರ ಮುಖಾಮುಖಿ ಸಮಾವೇಶ (Matrimonial Meet)

**(ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಬಾಂಧವರಿಗೊಂದು ಸುವರ್ಣಾವಕಾಶ)**

**ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ(ರಿ.) ಮೊದಲನೆ 'ಸಿ' ಮುಖ್ಯ ರಸ್ತೆ, ಗಂಗಾನಗರ ಬಡಾವಣೆ, ಬೆಂಗಳೂರು-32, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಮಹಿಳಾ ಸಮಾಜ (ರಿ.), ಮೈಸೂರು, ಕೊಡಗು ಗೌಡ ಸಮಾಜ (ರಿ.), ಮಡಿಕೇರಿ, ಗೌಡ ಸಮಾಜ (ರಿ.) ಮಂಗಳೂರು, ಇವರ ಸಂಯುಕ್ತ ಆಶ್ರಯದಲ್ಲಿ**

ಪ್ರಪ್ರಥಮ ಬಾರಿಗೆ ವಿನೂತನ ರೀತಿಯ ವಧು-ವರರ ಮುಖಾಮುಖಿ ಕಾರ್ಯಕ್ರಮ ಮೈಸೂರಿನಲ್ಲಿ ನಡೆಯಲಿದೆ. ಅರ್ಹ ಬಾಂಧವರು ಇದರ ಸದುಪಯೋಗವನ್ನು ಪಡೆದುಕೊಳ್ಳುವಂತೆ ವಿನಂತಿ.

ಆಸಕ್ತರು ದಿನಾಂಕ 5-12-2001ರೊಳಗೆ ಈ ಕೆಳ ಕಾಣಿಸಿದ ವ್ಯಕ್ತಿಗಳನ್ನು ಅಥವಾ ಈ ಮೇಲೆ ಕಾಣಿಸಿದ ಸಮಾಜಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ನೊಂದಾಯಿಸಿಕೊಳ್ಳತಕ್ಕದ್ದು. ವಧುವರರ ಕಡೆಯಿಂದ ಒಟ್ಟು ಇಬ್ಬರು (ವಧು-ವರರು)ಸೇರಿ ಭಾಗವಹಿಸಬಹುದು. ಪ್ರತಿ ಕುಟುಂಬವು ರೂ. 100/- ಅನ್ನು ಖುದ್ದಾಗಿ ಅಥವಾ ಡಿ.ಡಿ. ಮೂಲಕ ಈ ಮೇಲೆ ಕಾಣಿಸಿದ ವಿಳಾಸಕ್ಕೆ ಕಳುಹಿಸಿ ನೋಂದಾಯಿಸಿ ಕೊಳ್ಳುವುದು. (D. D. in favour of Kodagu Mathu Dakshina Kannada Gowda Samaja, Bangalore) ಇಬ್ಬರಿಗಿಂತ ಹೆಚ್ಚು ಸದಸ್ಯರು ಬರುವುದಿದ್ದರೆ ಪ್ರತಿಯೊಬ್ಬರಿಗೆ ರೂ. 50/- ನೀಡಿ ನೋಂದಾಯಿಸುವುದು. (ಮಕ್ಕಳಿಗೆ ಪ್ರವೇಶ ನಿರಾಕರಿಸಲಾಗಿದೆ.)

**ಸಮಾವೇಶ ನಡೆಯುವ ದಿನಾಂಕ : 16-12-2001, ಭಾನುವಾರ**
**ಸ್ಥಳ : ಹೋಟೆಲ್ ಸಿದ್ಧಾರ್ಥ, ಕೆ.ಎಸ್.ಆರ್.ಟಿ.ಸಿ. ಬಸ್ ನಿಲ್ದಾಣದ ಹತ್ತಿರ,**
**(ಛತ್ರಿಮರ ಮತ್ತು ಆರ್. ಗೇಟ್ ನಡುವೆ)**
**ಸಮಯ : ಪೂರ್ವಾಹ್ನ 9-30 ರಿಂದ ಮಧ್ಯಾಹ್ನ 2-00 ರ ತನಕ**

ವಧು/ವರರ ಹೆಸರು, ಮನೆ ಹೆಸರು, ತಂದೆ, ತಾಯಿ ಹೆಸರು, ಹಾಲಿ ವಿಳಾಸ, ಕೆಲಸದ ವಿವರ, ವಿದ್ಯಾರ್ಹತೆ, ನಕ್ಷತ್ರ, ರಾಶಿ, ಗೋತ್ರ, ಪೂರ್ತಿ ಪ್ರಮಾಣದ ಫೋಟೋ ತಪ್ಪದೆ ಕಳುಹಿಸಬೇಕು. ಹೆಚ್ಚಿನ ವಿವರಗಳಿಗೆ ಈಕೆಳಗಿನವರನ್ನು ಸಂಪರ್ಕಿಸುವುದು

*ಬೆಂಗಳೂರು :*

ಡಾ. ಕೆ. ಎಂ. ಬೋಜಪ್ಪ, ☎ : 080 - 3334111
ನಂಗಾರು ನಿಂಗರಾಜು, ☎ : 080 - 3433328
ಕುಯ್ಯಮುಡಿ ಸುಶೀಲ, ☎ : 080 - 3410994
ಸುಳ್ಯಕೋಡಿ ವೈಶಾಲಿ ಅಮರನಾಥ, ☎ : 080 - 3601245
ಎಸ್. ತಿಮ್ಮಪ್ಪಗೌಡ, ☎ : 080 - 5353937
ರಮೇಶ್‌ಗೌಡ, ☎ : 080 - 3433014
ಬಡ್ಡನ ಲತಾ ಸಿದ್ಧಾರ್ಥ ☎ : 080 - 3410994

*ಮೈಸೂರು :*

ಪಟ್ಟಡ ಶೀಲಾಮಣಿ, ಕೊಡಗುಸಂಗಾತಿ, ☎ : 0821 - 516771
ಪಾಣತ್ತಲೆ ಪಳಂಗಪ್ಪ, ☎ : 0821 - 562492
ದಂಬೆಕೋಡಿ ಭಾಗಿರಥಿ, ☎ : 0821 - 545595
ಕೆ. ಡಿ. ಮುತ್ತಮ್ಮ, ☎ : 0821 - 562411

*ಮಡಿಕೇರಿ :*

ಹೊಸೂರು ರಮೇಶ್ ಜೋಯಪ್ಪ, ☎ : 08272 - 28729, : 08272 - 28674
ಚೆಟ್ಟಿಮಾಡ ರಘುಪತಿ, ☎ : 08272 - 29906

*ಮಂಗಳೂರು :*

ನೂಜಿ ದಿನಕರಗೌಡ ☎ : 0824 - 427124

*ಸುಳ್ಯ :*

ಜಯಪ್ರಕಾಶ್, ಸುದ್ದಿಬಿಡುಗಡೆ, ☎ : 08257 - 20230
ಡಾ. ದೇವೀ ಪ್ರಸಾದ್, ☎ : 08257 - 71476

ಪ್ರಕಟಣೆ : ಕಾರ್ಯದರ್ಶಿ, ಕೊಡಗು ಮತ್ತು ದಕ್ಷಿಣ ಕನ್ನಡ ಗೌಡ ಸಮಾಜ, ಬೆಂಗಳೂರು

**Kodagu Sangathi** Kannada Fortnightly Edited, Published, Printed & Owned by Pattada P. Sheelamani, No. 35, Savitha Nilaya, I Cross, 4th Block, **Jayalaxmipuram, Mysore - 12.** And **SANGATHI** Office ☎ **: 0821/516771.** And Printed at Sri Guru Raghavendra Printers, 489, Devamba Agrahara, K. R. Mohalla, Mysore - 24. ☎ : 0821/431792.